॥ ಶ್ರೀ ॥



# ಮುಹೂರ್ತ ಶತಕಂ

(ಕೈ. ವಾ. ವೆಂಕಟ್ರಮಣ ಪಂಡಿತ ಕೃತ)



—: ಪುಸ್ತಕ ಸಿಗುವ ಸ್ಥಳ :—

—: ಸಂಗ್ರಾಹಕರು, ಪ್ರಕಾಶಕರು :—

ವೇ. ಶಂಕರ ಸುಬ್ರಾಯ ಜೋಶಿ, ಗೋಕರ್ಣ

೧೯೯೦] [ಬೆಲೆ : ರೂ. ೧೦-೦೦

॥ ಶ್ರೀ ॥



# ಮುಹೂರ್ತ ಶತಕಂ

(ಕ್ಯೆ. ವಾ. ವೆಂಕಟ್ರಮಣ ಪಂಡಿತ ಕೃತ)



—: ಪುಸ್ತಕ ಸಿಗುವ ಸ್ಥಳ :—

ವೇ. ಶಂಕರ ಸುಬ್ರಾಯ ಜೋಶಿ, ಗೋಕರ್ಣ

೧೯೯೧] [ಬೆಲೆ : ರೂ. ೧೦-೦೦



ಅಂಬುಜಜನ್ಮ ಮುಖೇಡ್ಯಂ ಕಂಬುಗ್ರೀವಂ ನವಾಂಬುರುಹನೇತ್ರಂ ।
ಸ್ತಂಬೇರಮಾಸ್ಯಮಾದ್ಯಂ ಲಂಬೋದರಮಂಬಿಕಾಸುತಂ ವಂದೇ ॥

ಶ್ರೀ

(ಶ್ರೀ ಕೇಶವ ಪಂಡಿತರಿಂದ ಪ್ರಣೀತವಾದ)

# ಮುಹೂರ್ತ ಶತಕ ಪ್ರಾರಂಭಃ

(ಸಂಜ್ಞಾಧ್ಯಾಯ)

ವಾಗ್ದೇವೀಂ ಗಣನಾಯಕಂ ಗ್ರಹವರಾನ್ ಗುರ್ವತ್ರಿಮುಖ್ಯಾನ್ ಮುನೀನ್ ವಿದ್ಯಾಮಾಧವಪಂಡಿತೇಂದ್ರಮುಖಿಲಾನ್ ಮೌಹೂರ್ತಿಕಾನ್‌ಸದ್ಗುರೂನ್ ॥ ನತ್ವಾಲೋಕ್ಯ ಮುಹೂರ್ತಶಾಸ್ತ್ರಮಖಿಲಂ ಸಂಗೃಹ್ಯ ಸಾರಂಧಿಯಾ ವಕ್ಷ್ಯೇ ಹೃದ್ಯಮಿದಂ ಮುಹೂರ್ತಶತಕಂ ಮೌಹೂರ್ತಿಕಪ್ರೀತಯೇ ॥೧॥

**ಟೀಕಾ:** ನಾನು (ಕೇಶವ ಪಂಡಿತನು) ಸರಸ್ವತಿ, ಗಣಪತಿ, ಸೂರ್ಯಾದಿ ಗ್ರಹ, ಗುರು ಅತ್ರಿ ಮೊದಲಾದ ಮುನಿ, ವಿಧ್ಯಾಮಾಧವ ಪಂಡಿತ, ಸದ್ಗುರುಗಳಾದ ಎಲ್ಲಾ ಪೂರ್ವಜ ಮುಹೂರ್ತಜ್ಞ ಇವರನ್ನೆಲ್ಲಾ ನಮಸ್ಕರಿಸಿ ಎಲ್ಲಾ ಮುಹೂರ್ತ ಶಾಸ್ತ್ರಗಳನ್ನು ನೋಡಿ ಜ್ಞಾನದಿಂದ ಸಂಗ್ರಹಿಸಿ ಮುಹೂರ್ತಜ್ಞರ ಸಂತೋಷಕ್ಕೆ ಈ ಮನೋಹರವಾದ "ಮುಹೂರ್ತಶತಕ ವೆಂಬ ಗ್ರಂಥವನ್ನೀಗ ಹೇಳುವೆನು.

ಮೇಷಾದ್ಯಾಃಪ್ರಥಮಾದಿನಾಮ ಸಹಿತಾ ವಾಚ್ಯಾಃಕ್ರಮಾದ್ರಾಶಯಃ ಪರ್ಯಾಯೈಶ್ಚ ಪುನಃಕ್ರಿಯಾಖ್ಯಮಜಭಂ ಯುಗ್ಮಂ ಯಮಾಖ್ಯಂ ವಣಿಕ್ ॥ ಜೂಕಾಖ್ಯೇಶ್ವಿಹಯಾಹ್ವಯಂ ಧನುರಳಿಃಕೋರ್ಪೀಚ ನಕ್ರೋಮೃಗೋರಾಶಿಃಸ್ಥಾನ ಗೃಹರ್ಕ್ಷಭಾಖ್ಯ ಉದಿತೋ ಲಗ್ನಂತು ತಸ್ಯೋದಯಃ ॥೨॥

**ಟೀ:** ಮೇಷ, ವೃಷಭ ಮೊದಲಾದ ೧೨ರಾಶಿಗಳಿಗೆ ಪ್ರಥಮ, ದ್ವಿತೀಯ ಇತ್ಯಾದಿ ದ್ವಾದಶ, ರಾಶಿಸಂಜ್ಞೆಗಳು ಮತ್ತು ಪರ್ಯಾಯದ ಹೆಸರು ಅಂದರೆ ಮೇಷಕ್ಕೆ ಕುರಿ, ವೃಷಭಕ್ಕೆ ಎತ್ತು ಮೊದಲಾದ ಸಂಸ್ಕೃತ ಕೋರ

ದಲ್ಲಿ ಹೇಳಿರುವ ಹೆಸರುಗಳೆಲ್ಲವು ಬರುವವು. ಮೇಲಾಗಿ ಮೇಷಕ್ಕೆ ಕ್ರಿಯ ಮಿಥುನಕ್ಕೆ ಯಾಮ, ತುಲೆಗೆ ಜೂಕ, ಧನುಗೆ ಅಶ್ವಿ, ಹಯ, ವೃಶ್ಚಿಕಕ್ಕೆ ಕೋರ್ಪಿ, ಮಕರಕ್ಕೆ ಮೃಗ, ಇತ್ಯಾದಿ ವಿಶೇಷ ಹೆಸರುಗಳು(ಸಂಜ್ಞೆಗಳು) ಇರುವವು. ಸಾಮಾನ್ಯವಾಗಿ ರಾಶಿಗಳಿಗೆ ಸ್ಥಾನ, ಗೃಹ ಋಕ್ಷ, ಭ, ಇತ್ಯಾದಿ ಹೆಸರುಗಳಿರುವವು. ರಾಶಿಗಳ ಉದಯಕ್ಕೆ ಲಗ್ನ ಎಂಬ ಹೆಸರು.

**ಲಗ್ನಂ ತನ್ವಭಿಧಂ ಧನಾಖ್ಯಮಪರಂ ಸ್ಥಾನಂ ತೃತೀಯಾದಿಕಂ ಭ್ರಾತ್ರಾಖ್ಯಂ ಸುಹೃದಂಬುನಾಮ ಸುತಧೀಸಂಜ್ಞಂ ಕ್ಷತಾರ್ಯಾಹ್ವಯಂ ದಾರಾಸ್ತಸ್ಮರನಾಮ ರಂಧ್ರಮರಣಾಯುರ್ನಾಮಕಂ ಧರ್ಮ-ಗುರ್ವಾಖ್ಯಂ ಕರ್ಮಖಸಂಜ್ಞಮಾಯ ಭವನಾಮಾಂತ್ಯವ್ಯಯಾಖ್ಯಂ ಕ್ರಮಾತ್ ॥೩॥**

**ಟಿ.:** ಲಗ್ನಭಾವಕ್ಕೆ ತನು(ದೇಹ)ವೆಂಬುದಾಗಿಯೂ, ತೃತೀಯ ಭಾವಕ್ಕೆ ಭ್ರಾತೃ ಎಂಬುದಾಗಿಯೂ, ಚತುರ್ಥಭಾವಕ್ಕೆ ಸುಹೃತ್ ಅಂಬು, ಎಂಬು-ದಾಗಿಯೂ ಪಂಚಮಕ್ಕೆ ಸುತ, ಧೀ(ಬುದ್ಧಿ) ಎಂಬುದಾಗಿಯೂ, ಷಷ್ಠಕ್ಕೆ ಕ್ಷತ, ಅರಿ, ಎಂಬುದಾಗಿಯೂ ಸಪ್ತಮಕ್ಕೆ ದಾರ(ಪತ್ನಿ)ಅಸ್ತ, ಸ್ಮರ ಎಂಬು-ದಾಗಿಯೂ, ಅಷ್ಟಮಕ್ಕೆ ರಂಧ್ರ ಮರಣ, ಆಯು ಎಂಬುದಾಗಿಯೂ ನವ-ಮಕ್ಕೆ ಧರ್ಮ,ಗುರು, ಎಂಬುದಾಗಿಯೂ ದಶಮಕ್ಕೆ ಕರ್ಮ, ಖ,(ಆಕಾಶ) ಎಂಬುದಾಗಿಯೂ ಏಕಾದಶಕ್ಕೆ ಆಯ, ಭವ, ಎಂಬುದಾಗಿಯೂ ದ್ವಾದಶಕ್ಕೆ ಅಂತ್ಯ, ವ್ಯಯ ಎಂಬುದಾಗಿಯೂ ಸಂಜ್ಞೆ ಇರುವದು.

**ಲಗ್ನಾನ್ಮೃತ್ಯು ಚತುರ್ಥಭೇಚ ಚತುರ ಶ್ರಾಖ್ಯೇ ತ್ರಿಕೋಣಾಭಿಧೌಧೀ ಧರ್ಮೌ ತ್ರಿಷಡಾಯ ಖಾನ್ಯುಪಚಯಾಖ್ಯಾನ್ಯಾತ್ಯಖಾಸ್ತಾಂಬುಭಂ॥ ಕೇಂದ್ರಾಖ್ಯಂತ್ವಯುಗೋಜನಾಮ ವಿಷಮಂ ಯುಗ್ಮಂಗ್ಮ ಸಂಜ್ಞಂ ಸಮಂ ಸಂಖ್ಯಾ ಭೂ ನಯನಾಗ್ನಿ ವಾರಿಧಿ ಶರತ್ವಾರ್ದ್ಯಾಃ ಪ್ರಸಿದ್ಧಾ ಮತಾಃ ॥೪॥**

**ಟೀ:** ಲಗ್ನದಿಂದ ಚತುರ್ಥ ಅಷ್ಟಮ ಸ್ಥಾನಗಳಿಗೆ 'ಚತುರಂಶ್ರ' ವೆನ್ನುವರು. ಲಗ್ನದೆಸೆಯಿಂದ ಪಂಚಮ ನವಮಗಳಿಗೆ "ತ್ರಿಕೋಣ" ವೆನ್ನುವರು. ತೃತೀಯ ಷಷ್ಠ ಏಕಾದಶ ಸ್ಥಾನಗಳಿಗೆ "ಉಪಚಯ" ವೆನ್ನುವರು. ಲಗ್ನ

ಚತುರ್ಥ ಸಪ್ತಮ ದಶಮಗಳಿಗೆ ಕೇಂದ್ರವೆನ್ನುವರು. ವಿಷಮಸ್ಥಾನಗಳಿಗೆ (೧ ೩ ೫ ಇತ್ಯಾದಿ) ಅಯುಂಕ್ ಓಜ ಎಂಬ ಹೆಸರು. ಸಮಸ್ಥಾನಗಳಿಗೆ (೨ ೪ ೬ ಇತ್ಯಾದಿ) ಯುಕ್ ಯುಗ್ಮ ಎಂಬ ಸಂಜ್ಞೆಯಿರುವದು. ಇದಲ್ಲದೇ ಜ್ಯೋತಿಃಶಾಸ್ತ್ರದಲ್ಲಿ ಭೂತಸಂಖ್ಯೆಯನ್ನು ಎಣಿಸುವರು. ಭೂಮಿ (೧) ನೇತ್ರ(೨) ಅಗ್ನಿ(೩) ಸಮುದ್ರ (೪) ಬಾಣ (೫) ಋತು (೬) ಇತ್ಯಾದಿ

**ಕೋದಂಡಕ್ರಿಯಕರ್ಕಿನಕ್ರವೃಷಭಾಃಪೃಷ್ಠೋದಯಾಖ್ಯಾಗ್ರಹಾಃ**
**ಸ್ಯುರ್ಮೂರ್ಧೋದಯಸಂಜ್ಞಿತಾಸ್ತದಪರೇಮೀನೋಭ್ಯುದೇ ತಿದ್ವಿಧಾ ॥**
**ಪುಂಸ್ತ್ರ್ಯಾಖ್ಯಾಶ್ಚ ಚರಸ್ಥಿರೋಭಯ ಗೃಹಾಃಖ್ಯಾಶ್ಚಕ್ರಿಯಾದ್ಯಾಃಕ್ರ-**
**ಮಾತ್ ಭಾಗಾಸ್ತೇಷ್ವಪಿ ಮೂರ್ಛನಾ**[೨೧]**ಮನು**[೧೪]**ಜಿನ**[೨೪]**ಕ್ಷ್ಮೈ**[೫] **ರ್ಭೈನ್ಮಿತಾಃ**
**ಪುಷ್ಕರಾಃ ॥೫॥**

**ಟಿ.:** ಮೇಷ, ವೃಷಭ, ಕರ್ಕ, ಧನು, ಮಕರ ರಾಶಿಗಳಿಗೆ ಪೃಷ್ಠೋದಯ ರಾಶಿಗಳೆನ್ನುವರು. ಮಿಥುನ ಸಿಂಹ ಕನ್ಯಾ ತುಲಾ ವೃಶ್ಚಿಕ ಕುಂಭರಾಶಿಗಳಿಗೆ ಮೂರ್ಧೋದಯ ರಾಶಿಗಳೆನ್ನುವರು. ಮೀನರಾಶಿಯು ಉಭಯೋದಯರಾಶಿಯೆನ್ನಲ್ಪಡುವದು. ಮೇಷಾದಿಯಾಗಿ ಪುರುಷಾದಿ ಹೆಸರು.
ಮೇಷ–ಪುರುಷ ವೃಷಭ–ಸ್ತ್ರೀ ಮಿಥುನ–ಪುರುಷ ಕರ್ಕ–ಸ್ತ್ರೀ ಇತ್ಯಾದಿ ಮತ್ತು ಚರ ಸ್ಥಿರ ಮೊದಲಾದ ಹೆಸರು. ಮೇಷ–ಚರ ವೃಷಭ–ಸ್ಥಿರ ಮಿಥುನ–ಉಭಯ ಕರ್ಕ–ಚರ ಇತ್ಯಾದಿ. ಅವುಗಳಲ್ಲಿಯಾದರೂ ಮೇಷ ಸಿಂಹ ಧನುಗಳಲ್ಲಿಯ ೨೧ನೇ ಭಾಗ ವೃಷಭ ಕನ್ಯಾ ಮಕರಗಳಲ್ಲಿ ೧೪ನೇ ಭಾಗ. ಮಿಥುನ ತುಲಾ ಕುಂಭಗಳಲ್ಲಿ ೨೪ನೇ ಭಾಗ. ಕರ್ಕ, ವೃಶ್ಚಿಕ ಮೀನಗಳಲ್ಲಿ ೫ನೇ ಭಾಗವು ಪುಷ್ಕರ ಭಾಗ(ಅಂಶ)ಗಳೆನ್ನಲ್ಪಡುವದು.

**ಅರ್ಕಾದೇರಭಿಧಾಸ್ತ್ವಿನಸ್ತುಹಿನಗುರ್ವಕ್ರಾರ ಭೌಮಾಜ್ಞವಿತ್ ಸೌ**
**ಮ್ಯಾಶ್ಚಾರ್ಯಗುರೂತಥಾಸಿತ ಭೃಗೂಸೌರಿಸ್ತಮೋಹೀಶಿಖೀ ॥ ತೇಷು**
**ಜ್ಞಾರ್ಯ ಸಿತಾಃಶುಭಾಬಲಯುತಶ್ಚಂದ್ರಶ್ಚಪಾಪಾಃಪರೇ ತೇಸತ್ಯಾರಖ**
**ಲಾಹ್ವಯಾಶ್ಚಗದಿತಾಃ ಸತ್ಸೌಮ್ಯಸಂಜ್ಞಾಃಶುಭಾಃ ॥೬॥**

**ಟಿ.:** ಸೂರ್ಯನಿಗೆ ಇನ, ಚಂದ್ರನಿಗೆ ತುಹಿನಗು. ಕುಜನಿಗೆ ವಕ್ರ ಆರ ಭೌಮ ಬುಧನಿಗೆ ಜ್ಞ ವಿತ್ ಸೌಮ್ಯ, ಗುರುವಿಗೆ ಆರ್ಯ ಗುರು, ಶುಕ್ರ-

ನಿಗೆ ಸಿತ ಭೃಗು, ಶನಿಗೆ ಸೌರಿ ರಾಹುವಿಗೆ ತಸು ಅಹಿ, ಕೇತುವಿಗೆ ಶಿಖಿ ಎಂದೂ ಹೆಸರು ಹೇಳುವರು. ಇವುಗಳ ಬುಧ ಶುಕ್ರ ಗುರು ಬಲಿಷ್ಠ (ಶುಕ್ಲಪಕ್ಷದ) ಚಂದ್ರ ಇವರು ಶುಭಗ್ರಹಗಳು. ಕುಜ ರವಿ ಶನಿಗಳಿಗೆ ಪಾಪಗ್ರಹವೆನ್ನುವರು. ಪಾಪಗ್ರಹಗಳಿಗೆ ಅಸತ್ ಕ್ರೂರ ಖಲ ಎಂಬ ಸಂಜ್ಞೆಯಿರುವದು. ಶುಭಗ್ರಹರಿಗೆ ಸತ್ ಸೌಮ್ಯ ಎಂಬ ಹೆಸರಿರುವದು.

**ಮಾರ್ತಂಡಾ ತ್ಪ್ರಥಮೋಕ್ಷನಕ್ರವನಿತಾ ಕರ್ಕಾಂತ್ಯಜೂಕಾಃಕ್ರಮಾತ್**
**ಜ್ಞೇಯಾಃಸ್ವೋಚ್ಚಗೃಹಾಸ್ತದಸ್ತನಿಲಯಾ ನೀಚಾದಿ[೧೦]ಶತ್ರ್ಯಂ[೩]ಶಕಾಃ ॥**
**ದ್ವಿ[೨೮]ಘ್ನೇಂದ್ರಾ[೧೫]ಸ್ತಿಥಿ ಬಾಣ[೫] ತಾರ[೨೭]ಕೃತ[೨೦] ಯಸ್ತೇಷೂಚ್ಚನೀಚಾಂಶಕಾಃ**
**ಸಿಂಹೋಕ್ಷಪ್ರಥಮಾಂಗನಾ ಹಯತುಲಾ ಕುಂಭಾಸ್ತ್ರಿಕೋಣಾ-**
**ಹ್ವಯಾಃ ॥೭॥**

**ಟೀ:** ಸೂರ್ಯನಿಗೆ ಮೇಷ ಚಂದ್ರನಿಗೆ ವೃಷಭ ಕುಜನಿಗೆ ಮಕರ ಬುಧನಿಗೆ ಕನ್ಯಾ ಗುರುವಿಗೆ ಕರ್ಕ ಶುಕ್ರನಿಗೆ ಮೀನ ಶನಿಗೆ ತುಲಾ ಈ ರಾಶಿಗಳು ಉಚ್ಚರಾಶಿಗಳು. ಉಚ್ಚರಾಶಿಗಳಿಗಿಂತ ಸಪ್ತಮ ರಾಶಿಗಳು ನೀಚರಾಶಿಗಳಾಗುವವು. ರವಿಗೆ ತುಲಾ ಚಂದ್ರನಿಗೆ ವೃಶ್ಚಿಕ ಕುಜನಿಗೆ ಕರ್ಕ ಬುಧನಿಗೆ ಮೀನ ಗುರುವಿಗೆ ಮಕರ ಶುಕ್ರನಿಗೆ ಕನ್ಯಾ ಶನಿಗೆ ಮೇಷ ಇವು ನೀಚರಾಶಿಗಳು. ರವಿಗೆ ಮೇಷದಲ್ಲಿ ೧೦ಅಂಶಗಳು ಅತ್ಯುಚ್ಚಾಂಶಗಳು ತುಲೆಯಲ್ಲಿ ೧೦ ಅಂಶಗಳು ಅತಿ ನೀಚಾಂಶಗಳು. ಚಂದ್ರನಿಗೆ ವೃಷಭದಲ್ಲಿ ೩ ಅಂಶಕಗಳು ಅತ್ಯುಚ್ಚಾಂಶಗಳೂ ವೃಶ್ಚಿಕದಲ್ಲಿ ೩ ಅಂಶಕಗಳು ಅತಿ ನೀಚಾಂಶಗಳೂ ಆಗುವವು. ಕುಜನಿಗೆ ೨೮ ಅಂಶಕಗಳು ಉಚ್ಚನೀಚ ರಾಶಿಗಳಲ್ಲಿ ಅತ್ಯುಚ್ಚಾಂಶ ಅತಿ ನೀಚಾಂಶಕಗಳಾಗುವವು. ಇದರಂತೆ ಬುಧನಿಗೆ ೧೫ ಗುರುವಿಗೆ ೫ ಶುಕ್ರನಿಗೆ ೨೭ ಶನಿಗೆ ೨೦ ಇವು ಆಯಾಯ ರಾಶಿಗಳಲ್ಲಿ ಆಯಾಯ ಅಂಶಗಳಾಗುವವು. ಸೂರ್ಯಾದಿ ಗ್ರಹರಿಗೆ ಅನುಕ್ರಮವಾಗಿ ಸಿಂಹ ವೃಷಭ, ಮೇಷಾ ಕನ್ಯಾ, ಧನು, ತುಲಾ, ಕುಂಭ ಇವು ಮೂಲ ತ್ರಿಕೋಣ ರಾಶಿಗಳಾಗುವವು. ಮುಂದಿನ ಕೋಷ್ಟಕದಿಂದ ಈ ವಿಷಯುವನ್ನು ಮನದಟ್ಟು ಮಾಡಿಕೊಳ್ಳಬಹುದು.

**ಶ್ಲೋಕ ೭**

| ಗ್ರಹರು | ಉಚ್ಚ ರಾಶಿ | ಉಚ್ಚಾಂಶಕ | ನೀಚರಾಶಿ | ನೀಚಾಂಶಕ | ಮೂಲತ್ರಿ ಕೋಣಾಂಶ ರಾಶಿ |
|---|---|---|---|---|---|
| ರವಿ | ಮೇಷ | ೧೦ | ಮೂಲಾ | ೧೦ | ಸಿಂಹ |
| ಚಂದ್ರ | ವೃಷಭ | ೩ | ವೃಶ್ಚಿಕ | ೩ | ವೃಷಭ |
| ಕುಜ | ಮಕರ | ೨೮ | ಕರ್ಕ | ೨೮ | ಮೇಷ |
| ಬುಧ | ಕನ್ಯಾ | ೧೫ | ಮೀನ | ೧೫ | ಕನ್ಯಾ |
| ಗುರು | ಕರ್ಕ | ೫ | ಮಕರ | ೫ | ಧನು |
| ಶುಕ್ರ | ಮೀನ | ೨೭ | ಕನ್ಯಾ | ೨೭ | ತುಲಾ |
| ಶನಿ | ತುಲಾ | ೨೦ | ಮೇಷ | ೨೦ | ಕುಂಭ |

ಸಿಂಹಃ ಕರ್ಕಟಕಃ ಕ್ರಿಯಾಳಿಭವನೇ ಸ್ತ್ರೀಯುಗ್ಮಭೇಂತ್ಯತ್ರಿನೌ ಗೋ. ತೌಲೀ ಘಟಿನಕ್ರಭೇಚಗದಿತಂ ಸ್ತ್ರೀಯಂತ್ರಿ ನಾದೇಗ್ರ್ರಹಂ ॥ ಮೇಷೈಣಾ ಸ್ಯತುಲಾಕುಳಿರಭವನೇಶಾದ್ಯಾನವಾಂಶಾಧಿಪಾಃ ॥ ಖೇಟಾ ಸ್ತದ್ಗೃಹತತ್ರಿಕೋಣ ಗೃಹಪಾದ್ರೇಕ್ಕಾಣಭಾಗಾಧಿಪಾಃ ॥ ॥೮॥

**ಟಿಃ** ಗ್ರಹರಿಗೆ ಸ್ವರಾಶಿಗಳಿವು—ರವಿಗೆ ಸಿಂಹ, ಚಂದ್ರನಿಗೆ ಕರ್ಕ, ಕುಜನಿಗೆ ಮೇಷ ವೃಶ್ಚಿಕಗಳು, ಬುಧನಿಗೆ ಕನ್ಯಾ ಮಿಥುನಗಳು, ಗುರುವಿಗೆ ಧನು ಮೀನಗಳು, ಶುಕ್ರನಿಗೆ ವೃಷಭ ತುಲೆಗಳು, ಶನಿಗೆ ಮಕರ ಕುಂಭಗಳು. ನವಾಂಶ (ರಾಶಿಯ ೧/೯ ಅಂಶ) ಅಧಿಪತಿಗಳು; ಮೇಷ, ಸಿಂಹ ಧನು ರಾಶಿ ಗಳಲ್ಲಿ ಮೊದಲನೇ ನವಾಂಶಾಧಿಪತಿಗಳು ಮೇಷೇಶ (ಕುಜ)ನಾಗುವನು. ಎರಡನೇ ನವಾಂಶಕ್ಕೆ ವೃಷಭೇಶ (ಶುಕ್ರ) ಮೂರನೇದಕ್ಕೆ ಮಿಥುನೇಶ (ಬುಧ) ಹೀಗೆಯೇ ೯ ನವಾಂಶಗಳಿಗೂ ತಿಳಿಯತಕ್ಕದ್ದು. ಇದರಂತೆ

ವೃಷಭ, ಕನ್ಯಾ, ಮಕರ ರಾಶಿಗಳಲ್ಲಿ ಮಕರೇಶ (ಶನಿ) ಆದಿಯಾಗಿ ಮುಂದೆ ೯ ನವಾಂಶಗಳಿಗೂ ಅಧಿಪತಿಗಳು. ಮಿಥುನ ತುಲಾ ಕುಂಭರಾಶಿಗಳ ನವಾಂಶಗಳಿಗೆ ತುಲಾಧಿಪತಿ (ಶುಕ್ರ) ಆದಿಯಾಗಿಯೂ ಕರ್ಕ ವೃಶ್ಚಿಕ ಮೀನರಾಶಿಗಳಲ್ಲಿ ಕರ್ಕಾಧಿಪ ಚಂದ್ರಆದಿಯಾಗಿಯೂ ಅಧಿಪತಿಗಳಾಗುವರು. ದ್ರೇಕ್ಕಾಣ (ರಾಶಿಯಲ್ಲಿ ⅓ ಅಂಶ) ಅಂಶಗಳಿಗೆ ಅಧಿಪತಿಗಳು–ಆಯಾಯ ರಾಶಿಯ ೩ ದ್ರೇಕ್ಕಾಣಗಳಿಗೆ ಅನುಕ್ರಮವಾಗಿ ಆರಾಶ್ಯಧಿಪತಿ. ಆ ರಾಶಿಯ ಪಂಚಮಾಧಿಪತಿ ಆ ರಾಶಿಯ ನವಾಧಿಪತಿಗಳು ಅಧಿಪರಾಗುವರು. ಮೇಷರಾಶಿಯ ಮೊದಲನೇ ದ್ರೇಕ್ಕಾಣ (೧೦ ಅಂಶ) ಕ್ಕೆ ಮೇಷೇಶ (ಕುಜ) ನೂ ದ್ವಿತೀಯ ದ್ರೇಕ್ಕಾಣಕ್ಕೆ ಸಿಂಹೇಶನೂ ಮೂರನೇ ದ್ರೇಕ್ಕಾಣ ಕ್ಕೆ ಧನುರಧಿಪನೂ ಅಧಿಪತಿಗಳು. ಹೀಗೆಯೇ ಪ್ರತಿಯೊಂದು ರಾಶಿಯ ಲ್ಲಿಯೂ ತಿಳಿಯತಕ್ಕದ್ದು.

**ಹೋರಾದ್ಯಾದಶ ಭಾಗಜಾಹನಿಪತಿಃ ಪೂರ್ವಸ್ಯ ವಾರಾಧಿಪ ಸ್ತಸ್ಮಾ ತ್ಪಂಚಮಪಸ್ತಥಾ ನಿಶಿಪರಂ ತತ್ತಷ್ಠ ಷಷ್ಠಾ ಕ್ರಮಾತ್ ॥ ಪಶ್ಯಕ್ತ್ಯ ರ್ಕಸುತತ್ತೃತೀಯ ದಶಮೌ ಜೀವಸ್ತ್ರಿಕೋಣಂ ಕುಜಃ ಸ್ವಸ್ಥಾನಾ ಚ್ಚತುರಶ್ರಮುಸ್ತಭವನಂ ಪಶ್ಯಂತಿ ಸರ್ವೇಗ್ರಹಾಃ ॥೯॥**

**ಟಿ:** ಕಾಲಹೋರೆಯೆಂದರೇನು?—ಹಗಲಿನ ⅟₁₂ ಅಂಶ ಅಂದರೆ ೨॥ ಘಟಿ ಮತ್ತು ರಾತ್ರಿಯ ⅟₁₂ ಅಂಶ ೨॥ ಘಟಿ. ಈ ೨॥ ಘಟಿಯ ಭಾಗಕ್ಕೆ ಕಾಲಹೋರೆಯೆನ್ನುವರು. ಹಗಲಿನಲ್ಲಿ ಮೊದಲನೇ ಕಾಲಹೋರೆಗೆ ಆ ವಾರಾಧಿಪನೇ ಅಧಿಪತಿಯು. ಅಂದರೆ ರವಿವಾರದ ಮೊದಲನೇ ೨॥ ಘಟಿ ರೂಪದ ಕಾಲಹೋರೆಗೆ ರವಿಯೇ ಅಧಿಪತಿಯು. ೨ ನೇ ಕಾಲಹೋ ರೆಗೆ ಆ ವಾರದ ೬ನೇ ವಾರಾಧಿಪತಿ ಅರ್ಥಾತ್ ಶುಕ್ರನು ಅಧಿಪತಿಯು. ೩ನೇದಕ್ಕೆ ಆ ಶುಕ್ರನಿಂದ ೬ನೇ ವಾರಾಧಿಪತಿ ಅಂದರೆ ಬುಧನು. ಹೀಗೆ ಯೇ ೧೨ ಕಾಲಹೋರೆಗಳಿಗೂ ಮುಂದೆ ಮುಂದಿನ ೬ನೇ ವಾರಾಧಿಪತಿಗಳ ನ್ನು ತಿಳಿಯತಕ್ಕದ್ದು. ರಾತ್ರಿಯಲ್ಲಿ ಮೊದಲನೇ ಕಾಲಹೋರೆಗೆ ಆ ವಾರದ ೫ ನೇ ವಾರಾಧಿಪತಿಯು ಅಧಿಪತಿಯಾಗುತ್ತಾನೆ. ಅಂದರೆ ರವಿವಾರ ಸಂಜೆಗೆ ಮೊದಲನೇ ಕಾಲಹೋರೆಗೆ ಗುರುವು ಆಗುತ್ತಾನೆ. ಇದರಂತೆ

ಪ್ರತಿವಾರದಲ್ಲೂತಿಳಿಯತಕ್ಕದ್ದು. 'ಮಂದಾಮರೇಡ್ಯಭೂಪುತ್ರಸೂರ್ಯ ಶುಕ್ರಬುಧೇಂದವಃ' (ಶನಿ ಗುರು ಕುಜ ಸೂರ್ಯ ಶುಕ್ರ ಬುಧ ಚಂದ್ರ) ಇದರಂತೆ ಕಾಲಹೋರಾಧಿಪತಿಗಳಾಗುವರು. ಗ್ರಹದೃಷ್ಟಿವಿಚಾರ ಶನಿಯು ತಾನಿದ್ದ ಸ್ಥಾನದಿಂದ ೩ನೇ ೧೦ನೇ ಸ್ಥಾನಗಳನ್ನು ನೋಡುವನು. ಮೇಷ ದಲ್ಲಿ ಶನಿಯಿದ್ದರೆ ಮಿಥುನ ಮಕರಗಳಿಗೆ ಅವನ ದೃಷ್ಟಿ ಬೀಳುವದು. ಗುರುವು ೫-೯ನೇ ಸ್ಥಾನಗಳನ್ನು ನೋಡುವನು. ಕುಜನು ೪-೮ ನೇ ಸ್ಥಾನಗಳನ್ನು ನೋಡುವನು. ಸಾಮಾನ್ಯವಾಗಿ ಎಲ್ಲ ಗ್ರಹರೂ ತಾವಿದ್ದ ಸ್ಥಾನದಿಂದ ಸಪ್ತಮ ಸ್ಥಾನವನ್ನು ನೋಡುವರು.

ಸೂರ‍್ಯಸ್ಯೇತಿ ಸುಹೃದಃ ಕುಜೇಂದು ಗುರವೋ ಜ್ಞಾರ್ಕಾವಿನಾರ್ಯೇಂ ದನಃ ಕಾವ್ಯಾರ್ಕೌ ರವಿಚಂದ್ರಭೂಮಿತನಯಾ ಜ್ಞಾರ್ಕೀಚಶುಕ್ರೇಂ ದುಜೌ ॥ ವಿಜ್ಞೇಯಾ ರಿಪವಃ ಸಿತಾರ್ಕ ತನಯೌನಜ್ಞಃ ಶಶೀವಿತ್ಕ ವೀ ಸೂರ್ಯೇಂದೂ ರವಿಭೌಮ ಶೀತಕಿರಣಾಃ ಶೇಷಾಗ್ರಹಾಃ ಸ್ಯುಃ ಸಮಾಃ ॥೧೦॥

**ಟಿ:** ರವಿಗೆ ಕುಜಚಂದ್ರಗುರುಗಳು ಮಿತ್ರರು. ಚಂದ್ರನಿಗೆ ರವಿಬುಧರೂ ಕುಜನಿಗೆ ಗುರುಸೂರ್ಯಚಂದ್ರರೂ, ಬುಧನಿಗೆ ಶುಕ್ರಸೂರ್ಯರೂ, ಗುರುವಿಗೆ ಕುಜಚಂದ್ರಸೂರ್ಯರೂ, ಶುಕ್ರನಿಗೆ ಶನಿಬುಧರೂ, ಶನಿಗೆ ಶುಕ್ರಬುಧರೂ ಮಿತ್ರರು. ರವಿಗೆ ಶುಕ್ರಶನಿಗಳು ವೈರಿಗಳು. ಚಂದ್ರನಿಗೆ ವೈರಿಗಳಿಲ್ಲ. ಕುಜನಿಗೆ ಬುಧನೂ, ಬುಧನಿಗೆ ಚಂದ್ರನೂ, ಗುರುವಿಗೆ ಬುಧಶುಕ್ರರೂ, ಶುಕ್ರನಿಗೆ ಸೂರ್ಯಚಂದ್ರರೂ, ಶನಿಗೆ ಸೂರ್ಯಚಂದ್ರಕುಜರು ಶತ್ರುಗಳು. ಉಳಿದವುಗಳು ಸಮರು. ಅಂದರೆ ಮಿತ್ರರೂ ಅಲ್ಲ; ಶತ್ರುಗಳೂ ಅಲ್ಲ. ಸೂರ್ಯನಿಗೆ ಬುಧ, ಚಂದ್ರನಿಗೆ ಕುಜ, ಗುರು ಶುಕ್ರಶನಿಗಳು, ಕುಜನಿಗೆ ಶುಕ್ರಶನಿಗಳೂ, ಬುಧನಿಗೆ ಕುಜಗುರುಶನಿಗಳು ಗುರುವಿಗೆ ಶನಿಯೂ, ಶುಕ್ರನಿಗೆ ಕುಜಗುರುಗಳು, ಶನಿಗೆ ಗುರುವೂ ಸಮರಾಗುವರು.

ಭೇಶಾದಸ್ರಯಮಾಗ್ನಿ ಧಾತೃಶಶಿನೋ ರುದ್ರಾದಿ ತೀಗೀಷ್ಪತಿಃ ಸಂಪ್ರೈ ಣಾಃ ಪಿತರೋರ್ಯಮಾಭಗರವಿ ತ್ವಷ್ಟೃಶಾಗೇಂದ್ರಾಗ್ನಯಃ ॥ ಮಿತ್ರೇಂದ್ರಾವಪಿನೈರುತಿಶ್ಚ ಸಲಿಲಂ ವಿಶ್ವೇ ಮುಕುಂದೋವಸು

ಕ್ಷೀರೇಶಾವಜಏಕಪಾತ್ ಪುನರಹಿರ್ಬುಧ್ನ್ಯಶ್ಚ ಪೂಷಾಃಕ್ರಮಾತ್ ॥

**ಟಿ:** ನಕ್ಷತ್ರಾದಿದೇವತೆಗಳು ಈ ರೀತಿ ಇರುವವು— ಅಶ್ವಿನೀ ನಕ್ಷತ್ರಕ್ಕೆ ಅಶ್ವಿನೀ ದೇವತೆಗಳು, ಭರಣಿಗೆ ಯಮ, ಕೃತ್ತಿಕೆಗೆ ಅಗ್ನಿ, ರೋಹಿಣಿಗೆ ಬ್ರಹ್ಮ, ಮೃಗಶಿರೆಗೆ ಚಂದ್ರ, ಆರ್ದ್ರಗೆ ರುದ್ರ, ಪುನರ್ವಸುವಿಗೆ ಅದಿತಿ ತಿಷ್ಯಕ್ಕೆ ಬೃಹಸ್ಪತಿ, ಆಶ್ಲೇಷಗೆ ಸರ್ಪ, ಮಘೆಗೆ ಪಿತೃಗಳು, ಹುಬ್ಬೆಗೆ ಅರ್ಯಮ, ಉತ್ತರೆಗೆ ಭಗ, ಹಸ್ತಕ್ಕೆ ರವಿ, ಚಿತ್ರೆಗೆ ತ್ವಷ್ಟ್ರ, ಸ್ವಾತಿಗೆ ವಾಯು, ವಿಶಾಖೆಗೆ ಇಂದ್ರಾಗ್ನಿಗಳು, ಅನುರಾಧೆಗೆ ಮಿತ್ರ, ಜ್ಯೇಷ್ಠೆಗೆ ಇಂದ್ರ, ಮೂಲಕ್ಕೆ ನಿರ್ಋತಿ, ಪೂರ್ವಾಷಾಢಕ್ಕೆ ಜಲ, ಉತ್ತರಾಷಾಢಕ್ಕೆ ವಿಶ್ವೇದೇವತೆಗಳು, ಶ್ರವಣಕ್ಕೆ ವಿಷ್ಣು, ಧನಿಷ್ಠೆಗೆ ವಸುಗಳು, ಶತಭಿಷೆಗೆ ವರುಣನು, ಪೂರ್ವಾಭದ್ರೆಗೆ ಅಜಏಕಪಾತ್, ಉತ್ತರಾಭದ್ರೆಗೆ ಅಹಿರ್ಬುಧ್ನ್ಯ, ರೇವತಿಗೆ ಪೂಷ. ಹೀಗೆ ಈ ನಕ್ಷತ್ರಗಳಿಗೆ ಈ ದೇವತೆಗಳು. ॥೧೧॥

ಪೂರ್ವಾಪ್ರೋಷ್ಠಪದಶ್ಚಪೂರ್ವಪದಯುಕ್ಫಲ್ಗುನ್ಯ ಷಾಡಾನ್ವಿತಃ
ಸ್ಯಾತ್ಪೂರ್ವಾ ತ್ರಯಮುತ್ತರಾತ್ರಯಮತಸ್ತಾರಾತ್ರಯಂಚೋತ್ತರಂ
ಪೂರ್ವಾಪ್ರೋಷ್ಠಪದಾದಿತಾರಯುಗಲಂಸ್ಯಾದ್ಭಾದ್ರಬುಧ್ನ್ಯಾಹ್ವಯಂ
ಮಾತ್ರಾಖ್ಯಾದಿ ತಿರರ್ಣವಃ ಶತಭಿಷಕ್ ಶೂರ್ಪಾಖ್ಯವೈಂದ್ರಾಗ್ನ್ಯಭಂ ॥ ॥೧೨॥

**ಟಿ:** ಹುಬ್ಬಾ, ಪೂರ್ವಾಭದ್ರೆಗಳಿಗೆ ಕೂಡಿ ಪೂರ್ವಾತ್ರಯವೆಂಬ ಹೆಸರು. ಈ ಪೂರ್ವಾತ್ರಯಕ್ಕಿಂತ ಮುಂದಿನ ಮೂರು ನಕ್ಷತ್ರಗಳಿಗೆ ಅಂದರೆ ಉತ್ರಾ, ಉತ್ರಾಷಾಢ, ಉತ್ರಾಭದ್ರಾ ನಕ್ಷತ್ರಗಳಿಗೆ ಕೂಡಿ ಉತ್ತರಾತ್ರಯು ವೆನ್ನುವರು. ಪೂರ್ವಾಭದ್ರೆಗೆ, ಭಾದ್ರವೆಂದು, ಉತ್ತರಾಭದ್ರೆಗೆ ಬುಧ್ನ್ಯ ವೆಂದೂ ಅನ್ನುವರು. ಪುನರ್ವಸುವಿಗೆ ಮಾತೃ, ಶತಭಿಷೆಗೆ ಅರ್ಣವ, ವಿಶಾಖೆಗೆ ಶೂರ್ಪವೆಂದೂ ಸಂಜ್ಞೆಗಳಿರುವವು.

ಊರ್ಧ್ವಾಸ್ಯಂವಸುಕೋತ್ತರಾರ್ದ್ರವಹರೀ ಶಾರ್ಕ್ರ್ಯೋಡು ತಿರ್ಯಙ್ಮುಖಂ
ಮೈತ್ರಾಂತ್ಯಾಶ್ವ್ಯದಿತೀಂದ್ವಿತ್ವತ್ರಯಾವ್ಯಷೋಡ್ವನ್ಯೋಡುಚಾಧೋಮುಖಂ ॥ ಚಿತ್ರಾಂತ್ಯೈಂದವಮೈತ್ರಭಂ ಮೃದುಚರಂ ಶ್ರೋತ್ರದ್ವಯಾಬ್ಧಿಪ್ರಸೂ ವಾತಕರ್ಕ್ಷಂಸ್ಥಿರಮುತ್ತರಾಜಭಮಿನಾರಾದ್ಯಂ ಲಘೂಗ್ರಂ ಪರಂ ॥ ॥೧೩॥

ಟೀ: ಧನಿಷ್ಠಾ, ರೋಹಿಣಿ, ಉತ್ತರಾ, ಉತ್ರಾಷಾಢಾ, ಉತ್ರಾಭದ್ರಾ, ಶತಭಿಷೆ, ಶ್ರವಣ, ಆರ್ದ್ರ, ತಿಷ್ಯ ಈ ೯ ನಕ್ಷತ್ರಗಳಿಗೆ ಊರ್ಧ್ವ ಮುಖ ನಕ್ಷತ್ರಗಳೆನ್ನುವರು. ಅನುರಾಧಾ, ರೇವತಿ, ಅಶ್ವಿನಿ, ಪುನರ್ವಸು, ಮೃಗ ಶಿರ, ಹಸ್ತ, ಚಿತ್ರಾ, ಸ್ವಾತಿ, ಜ್ಯೇಷ್ಠ ಈ ೯ ನಕ್ಷತ್ರಗಳು ತಿರ್ಯಙ್ಮುಖಗಳು. ಉಳಿದ ಭರಣಿ, ಕೃತ್ತಿಕಾ, ಆಶ್ಲೇಷಾ, ಮಘಾ, ಹುಬ್ಬ, ಪೂರ್ವಾಷಾಢಾ, ವಿಶಾಖಾ, ಮೂಲಾ ಈ ೯ ನಕ್ಷತ್ರಗಳಿಗೆ ಅಧೋಮುಖ ನಕ್ಷತ್ರಗಳೆನ್ನುವರು ಚಿತ್ರಾ, ರೇವತಿ, ಮೃಗಶೀರ್ಷ, ಅನುರಾಧಾ, ಈ ನಾಲ್ಕು ನಕ್ಷತ್ರಗಳು ಮೃದು ನಕ್ಷತ್ರಗಳು. ಶ್ರವಣ, ಧನಿಷ್ಠಾ, ಶತಭಿಷೆ, ಪುನರ್ವಸು ಸ್ವಾತಿ ಇವು ಚರ ನಕ್ಷತ್ರಗಳು. ಉತ್ರಾ ಉತ್ರಾಷಾಢ ಉತ್ತರಾಭದ್ರಾ ರೋಹಿಣಿ ಇವು ಸ್ಥಿರ ನಕ್ಷತ್ರಗಳು. ಹಸ್ತ, ತಿಷ್ಯ, ಅಶ್ವಿನಿ, ಇವು ಲಘು ಸಂಜ್ಞಕ ಗಳು. ಉಳಿದ ಭರಣಿ, ಕೃತ್ತಿಕಾ, ಆರ್ದ್ರಾ, ಆಶ್ಲೇಷಾ, ಮಘಾ, ಹುಬ್ಬಾ ಪೂರ್ವಾಷಾಢ ಪೂರ್ವಾಭದ್ರಾ ವಿಶಾಖಾ, ಜ್ಯೇಷ್ಠ ಮೂಲ ಇವುಗಳಿಗೆ ಉಗ್ರ ನಕ್ಷತ್ರಗಳೆನ್ನುವರು.

**ನಂದಾಚೋಪರಿಭದ್ರಕಾ ಚ ವಿಜಯಾ ರಿಕ್ತೇತಿ ಪೂರ್ಣೇತಿತಾಃ ವಿಜ್ಞೇಯಾಃ ಪ್ರಥಮಾದಿಕಾಶ್ಚ ತಿಥಯಃ ಪಕ್ಷೌ ಚ ಶುಕ್ಲಾಸಿತೌ ॥ ಛಿದ್ರಾಖ್ಯ ಸ್ತಿಥಯೋರ್ಕಷಡ್ವಸುಮಿತಾಃ ಸ್ಯುರ್ದ್ವ್ಯರಿಕ್ತಾನ್ವಿತಾಃ ಪಾತೋ ವ್ಯತಿಪಾತ ಏವ ಸಕಲಾ ಯೋಗಾಃ ಪ್ರಸಿದ್ಧಾಃ ಪರೇ ॥ ॥೧೪॥**

ಟೀ: ಪ್ರತಿಪದೆಗೆ ನಂದಾ, ಬಿದಿಗೆಗೆ ಭದ್ರಾ, ತದಿಗೆಗೆ ವಿಜಯಾ, ಚತುರ್ಥಿಗೆ ರಿಕ್ತಾ, ಪಂಚಮಿಗೆ ಪೂರ್ಣಾ, ಎಂಬ ಹೆಸರು. ಪುನಃ ಷಷ್ಠಿಯಿಂದ ದಶಮ್ಯಂತವರೆಗೂ ಏಕಾದಶಿಯಿಂದ ಪೂರ್ಣಿಮೆವರೆಗೂ ಅದೇ ನಂದಾದಿ ಸಂಜ್ಞೆಗಳು. ಪ್ರತಿಪದೆಯಿಂದ ಪೂರ್ಣಿಮೆಯವರೆಗೆ ಶುಕ್ಲಪಕ್ಷ. ಪುನಃ ಪ್ರತಿಪದೆಯಿಂದ ಅಮಾವಾಸ್ಯೆಯವರೆಗೆ ಕೃಷ್ಣಪಕ್ಷವೆಂದು ಹೆಸರು. ಅಮಾ ವಾಸೆ ಚತುರ್ಥೀ ನವಮೀ ಚತುರ್ದಶಿ ದ್ವಾದಶಿ ಷಷ್ಠೀ ಅಷ್ಟಮೀ ಇವುಗಳಿಗೆ ಛಿದ್ರ ತಿಥಿಗಳೆನ್ನುವರು. ಪಾತವೆಂಬುದು ಯೋಗಗಳಲ್ಲೊಂದಾದ ವ್ಯತಿಪಾತವೇ ಇರುತ್ತದೆ. ಉಳಿದ ವಿಷ್ಕಂಭಃಪ್ರೀತಿರಾಯುಷ್ಮಾನ್ ಇತ್ಯಾದಿ ಯೋಗಗಳು ಲೋಕಪ್ರಸಿದ್ಧಗಳಾಗಿವೆ.

**ಸಿಂಹಾದ್ಯಂ ಕರಣಂ ಚರಾಖ್ಯಮುದಿತಂ ಸಿಂಹೋಬವೋಬಾಲವೋ**
**ವ್ಯಾಘ್ರೋನಾಮ ವರಾಹಗರ್ದಭಕಯೋಃ ಸ್ಯಾತ್ಕೌಲನಸ್ತೈತಿಲಃ ॥**
**ಮಾತಂಗೇಗರಜೋವೃಷಸ್ಯ ವಣಿಜೋ ವಿಷ್ಟಿಶ್ಚಭದ್ರಾಸ್ಥಿರಂ ಪ**
**ಕ್ಷ್ಯಾಖ್ಯಂಚತುರಂಘ್ರಿ ನಾಮಕರಣಂ ನಾಗಶ್ಚಕಿಂಸ್ತುಘ್ನಕಃ ॥ ॥೧೫॥**

**ಟೀ:** ಕರಣಗಳಲ್ಲಿ ಚರ ಸ್ಥಿರಗಳೆಂಬ ಎರಡು ಭೇದಗಳು. ಶುಕ್ಲ ಪ್ರತಿಪದೆಯ ಅಪರಾರ್ಧದಿಂದ ಕೃಷ್ಣ ಚತುರ್ದಶಿಯ ಪೂರ್ವಾರ್ಧದವರೆಗೆ ಎಂಟಾವೃತ್ತಿಯಿಂದ ಈ ಚರ ಕರಣಗಳು ಗೋಚರಿಸುವವು. ಸಿಂಹಕ್ಕೆ ಬವ, ವ್ಯಾಘ್ರಕ್ಕೆ ಬಾಲವ, ವರಾಹಕ್ಕೆ ಕೌಲವ, ಗರ್ದಭಕ್ಕೆ ತೈತಲ, ಮಾತಂಗಕ್ಕೆ ಗರಜ, ವೃಷಭಕ್ಕೆ ವಣಿಜ, ವಿಷ್ಟಿಗೆ ಭದ್ರಾ, ಇವು ಚರ ಕರಣಗಳು. ಶಕುನಿ ಚತುಷ್ಪಾತ್ ನಾಗವಾನ್ ಕಿಂಸ್ತುಘ್ನ ಹೀಗೆ ಕೃಷ್ಣಪಕ್ಷ ಚತುರ್ದಶಿ ಅಪರಾರ್ಧದಿಂದ ಶುಕ್ಲ ಪ್ರತಿಪದೆಯ ಪೂರ್ವಾರ್ಧದವರೆಗೆ ಈ ನಾಲ್ಕು ಸ್ಥಿರಕರಣಗಳು ಗೋಚರಿಸುವವು. (ತಿಥ್ಯರ್ಧಂಕ ಕರಣಂ) ಈ ತತ್ವದಂತೆ ಒಂದು ತಿಥಿಗೆ ಎರಡು ಕರಣಗಳು ಸಲ್ಲುವವು. ಶುಕ್ಲಪ್ರತಿಪದೆಯ ಉತ್ತರಾರ್ಧವು ಬವ. ಬಿದಿಗೆಯ ಪೂರ್ವಾರ್ಧವು ಬಾಲವ. ಅದರ ಅಪರಾರ್ಧವು ಕೌಲವ. ಹೀಗೆಯೇ ಕರಣಗಳ ಆವೃತ್ತಿಯನ್ನು ತಿಳಿಯುವರು. ಕೃಷ್ಣ ಚತುರ್ದಶಿಯ ಅಪರಾರ್ಧಕ್ಕೆ ಶಕುನಿ ಅಮಾವಾಸೆಯ ಪೂರ್ವಾರ್ಧಕ್ಕೆ ಚತುಷ್ಪಾತ್ ಅದರ ಉತ್ತರಾರ್ಧಕ್ಕೆ ನಾಗವಾನ್ ಶುಕ್ಲ ಪ್ರತಿಪದೆಯ ಪೂರ್ವಾರ್ಧಕ್ಕೆ ಕಿಂಸ್ತುಘ್ನ ಹೀಗೆ ಸ್ಥಿರಕರಣಗಳಾಗುವವು.

**ಪಂಚಾಂಗಂ ತಿಥಿವಾರತಾರಕರಣಂ ಯೋಗಸ್ತಥಾ ರಾಶಿನಾಯುಕ್ತಂ**
**ತಚ್ಚ್ಯಷಡಂಗಮಿತ್ಯಭಿಹಿತಂತಚ್ಚಗ್ರಹೇನಾಧ್ಯನ್ವಿತಂ ॥ ಸಪ್ತಾಂಗಂ ಶು**
**ಭಕರ್ಮಣಾಮನುಗುಣಃ ಕಾಲೋಮುಹೂರ್ತಾಹ್ವಯಃ ಸ್ಯಾದಿತ್ಯೇ**
**ವಮಿಹೋಚಿತಾ ಗೃಹಖಗರ್ಕ್ಷಾದೇಸ್ತ್ವ ಸಂಜ್ಞೋದಿತಾಃ ॥ ॥೧೬॥**

**ಟೀ:** ತಿಥಿ ವಾರ ನಕ್ಷತ್ರ ಯೋಗ ಕರಣ ಇವುಗಳಿಂದ ಕೂಡಿ ಪಂಚಾಂಗವೆಂದು ಹೆಸರು. ಇದೇ ರಾಶಿಯಿಂದ ಕೂಡಿಸಲ್ಪಟ್ಟಾಗ ಷಡಂಗವೆನ್ನುವರು. ಈ ಷಡಂಗಕ್ಕೆ ಗ್ರಹಯುಕ್ತವಾದಲ್ಲಿ ಸಪ್ತಾಂಗವೆನ್ನುವರು. ಶುಭಕರ್ಮಗಳಿಗೆ ಅನುಕೂಲವಾದ ಕಾಲವಿಶೇಷಕ್ಕೆ ಮುಹೂರ್ತವೆನ್ನುವರು. ಈ ಸಂಜ್ಞಾಧ್ಯಾಯದಲ್ಲಿ ರಾಶಿ ಗ್ರಹ ನಕ್ಷತ್ರಾದಿಗಳ ಸಂಜ್ಞೆಗಳು ಈ ರೀತಿ ಹೇಳಲ್ಪಟ್ಟಿರುವವು.

ಇಲ್ಲಿಗೆ ಸಂಜ್ಞಾಧ್ಯಾಯವು ಮುಗಿಯಿತು.

---

# ದೋಷಾಧ್ಯಾಯಃ

**ಮಂದಾರೋದಯು ದೃಷ್ಟ್ಯಹಾನಿ ಗುಳಿಕಸ್ತ್ಯಜೋಡುಮೋಷಾ ವ ಮೂಪಾಶ್ವರ್ೆ ವಿಷ್ಟ್ಯದಯೋವಿಷಾಹಿಮತಿಖೇಚಕ್ರಾರ್ಧಚಂದ್ರಾಷ್ಟ ಮೌ ॥ ಪಾತಾಂತ್ಯಾಶುಭಸಗ್ರಹಾವವಿಹಿತೋವರ್ಷಾದಿಕಾಲೋದಿನ್ಯಾ ಬ್ದಾಂತಶೌಭಂ ವಿಪದಾದ್ಯಸೂರ್ಯಸಿತಯೋ ರಸ್ತಂಚ ವರ್ಜ್ಯಾಃ ಶುಭೇ ॥ ॥೧॥**

ಟಿ: ಮಹಾದೋಷಗಳು—ಶನಿ.ಕುಜರು ಲಗ್ನದಲ್ಲಿರುವಿಕೆಯು, ಲಗ್ನಕ್ಕೆ ಶನಿ, ಕುಜರ ದೃಷ್ಟಿ, ಶನಿ ಕುಜವಾರ, ಲಗ್ನದಲ್ಲಿ ಮಾಂದಿ ಇರುವಿಕೆ. ತ್ಯಾಜ್ಯ ನಕ್ಷತ್ರಗಳು ಮೇಷಲಗ್ನ, ಕೃಷ್ಣ ಚತುರ್ದಶಿ ಪ್ರತಿಪದಿ ವಿಷ್ಟ್ಯ ದಯ ವಿಷಘಟಿ ಉಷ್ಣಶಿಖೆ ಚಕ್ರಾರ್ಧಯೋಗ, ಚಂದ್ರನು ಅಷ್ಟಮದಲ್ಲಿ ರುವಿಕೆ ಚಂದ್ರನಿಂದ ಅಷ್ಟಮ ಲಗ್ನವಾಗುವಿಕೆ, ವ್ಯತೀಪಾತದ ಅಂತ್ಯಭಾಗ ಚಂದ್ರನು ಪಾಪಗ್ರಹರಿಂದ ಕೂಡಿರುವಿಕೆ, ನಿಷಿದ್ಧಗಳಾದ ವರ್ಷ ಆಯನ, ಮೊದಲಾದವುಗಳು, ಹಗಲಿನ ಅಂತ್ಯಭಾಗ, ವರ್ಷದ ಅಂತ್ಯಕಾಲವು ,ವಿಪತ್ ಪ್ರತ್ಯರ ಮೊದಲಾದ ತಾರೆಗಳು ಗುರು, ಶುಕ್ರರ ಅಸ್ತ ಇವೆಲ್ಲ ಮಹಾದೋಷಗಳು, ತ್ಯಾಜ್ಯಗಳು.

**ಊರ್ಧ್ವಾಹೋಜ್ಝಿತ ಸರ್ವ ಕರ್ಮಣಿ ನಿಶಾವರ್ಜ್ಯಾಪ್ರಭಾತಂವಿನಾ ಮಾಸಪ್ರೋಕ್ತವಿಧಿಂವಿನಾಖಿಲ ವಿಧೌತ್ಯಾಜ್ಯಶ್ಚ ಮಾಸೋಧಿಕಃ॥ ಮಾ. ಸಾವಾಶಯನಾಹ್ವಯಾಃಸುರಮಹೋತ್ಸಾತಗ್ರಹಾವೇರ್ದಿನಂ ತ್ಯಾಜ್ಯಂ ಸಂಕ್ರಮಣಂಮಹಾಗ್ನ್ಯುಡುಮುಖೇ ಸಪ್ತಾಹ ಮಂತ್ಯಂತ್ರಹಃ ॥ ।೨।**

ಟಿ: ವಿವಾಹವನ್ನುಳಿದು ಎಲ್ಲ ಕಾರ್ಯಗಳಲ್ಲಿ ರಾತ್ರಿಯೂ ವರ್ಜ್ಯವು ಆದರೆ ಪ್ರಭಾತಕಾಲವು ವರ್ಜ್ಯವಲ್ಲ. ಮಾಸೋಕ್ತ ಕಾರ್ಯಗಳ ಹೊರತಾಗಿ ಅಧಿಕ ಮಾಸವು ಎಲ್ಲಾ ಕಾರ್ಯಗಳಲ್ಲಿ ತ್ಯಾಜ್ಯವು. ಶಯನಮಾಸ ಅಂದರೆ ಶಯನೈಕಾದಶಿಯಿಂದ ಮುಂದೆ ನಾಲ್ಕು ಮಾಸಗಳು ಶುಭಕರ್ಮಗಳಲ್ಲಿ ತ್ಯಾಜ್ಯಗಳು. ದೇವತಾಮಹೋತ್ಸವದಿನ ಮಹೋತ್ಪಾತದಿನ, ಹಾಗೂ ಚಂದ್ರ ಸೂರ್ಯಗ್ರಹಣ ಮತ್ತು ಮೇಷಾದಿ ಸಂಕ್ರಾಂತಿ ಕಾಲಗಳು, ಮಹಾ ನಕ್ಷತ್ರ ಕೃತ್ತಿಕೆಯ ಆದಿಯಲ್ಲಿ ೭ ದಿವಸಗಳು, ತುದಿಯಲ್ಲಿ ೧ ದಿವಸವೂ ತ್ಯಾಜ್ಯವಾದವುಗಳು.

ಗರ್ಭಾಧಾನವಿಧಾವೃತೂದ್ಗಮಮುಖಾನಾಯರ್ಶ್ಚ ತಸ್ರೋನಿಶಾಃ ಪ
ರ್ಜ್ಯಾಃ ಸ್ಯುಃ ಶ್ರುತಿವೇದನೇ ತಿಥಿಭಯೋಃ ಸಂಧಿಶ್ಚವರ್ಜ್ಯೋದಿವಾ॥
ಚೂಡಾಕರ್ಮಣಿ ಜನ್ಮಮಾಸದಿನಭಂತ್ಯಾಜ್ಯಂ ಸಮೋಬ್ದಾಃಸ್ತ್ರಿಯಾಂ
ಗರ್ಭಿಣ್ಯಾಂ ಗೃಹಕರ್ಮದೂರಗಮನಂ ಚೌಲಂ ಚ ವರ್ಜ್ಯಂ
ಶಿಶೋಃ ॥ ॥೩॥

ಟಿ: ಗರ್ಭಾಧಾನದಲ್ಲಿ ಸ್ತ್ರೀಯು ರಜೋದರ್ಶನವಾದಂದಿನಿಂದ ನಾಲ್ಕು ರಾತ್ರಿಗಳು ತ್ಯಾಜ್ಯಗಳು. ಕರ್ಣವೇಧನೆ (ಕಿವಿಚುಚ್ಚುವಿಕೆ)ಯಲ್ಲಿ ಹಗಲು ತಿಥಿ, ಸಂಧಿ, ನಕ್ಷತ್ರಸಂಧಿಗಳು ವರ್ಜ್ಯಗಳು. ಚೌಲದಲ್ಲಿ ಜನ್ಮಮಾಸ ಜನ್ಮತಿಥಿ ಜನ್ಮನಕ್ಷತ್ರಗಳು ವರ್ಜ್ಯಗಳು. ಮತ್ತು ಜನ್ಮಾದಿ ಸಮಸಂಖ್ಯೆಗಳಾದ ವರ್ಷಗಳು ತ್ಯಾಜ್ಯಗಳು. ತನ್ನ ಪತ್ನಿಯು ಗರ್ಭಿಣಿಯಿದ್ದಾಗ ಗೃಹನಿರ್ಮಾಣ ದೂರಪ್ರವಾಸ ಶಿಶುವಿನ ಚೌಲ ಇವು ವರ್ಜ್ಯಗಳು.

ಜನ್ಮರ್ಕ್ಷಂ ಪ್ರಥಮಂ ಪ್ರಭಾತಸಮಯೇಧ್ವನೋಘನಿರ್ಹ್ನಿಂದಿತಃ ಕಾ
ಲೋನಧ್ಯಯನೋ ದ್ವಿಜನ್ಮನಿತಥಾ ವಿದ್ಯಾಕ್ಷರಾರಂಭಣೇ ॥ ಸೌಮ್ಯಾ
ಸ್ತಂ ಚ ಕರಗ್ರಹೇ ಜನನಭಂ ಪುಂಸಃ ಶಲಾಕಾಸತಸ್ತ್ಯಾಜ್ಯಾ ಸದ್ಮಸಿ
ದಗ್ಧವೇಧ ಸಹಿತಾಜ್ವಾಲಾಪ್ರವೇಶೇತಥಾ ॥ ॥೪॥

ಟಿ: ಉಪನಯನದಲ್ಲಿ ಪ್ರಥಮ ಪರ್ಯಾಯದ ಜನ್ಮತಾರೆಯು ಪ್ರಭಾತ ಕಾಲದಲ್ಲಿ ಮೇಘಧ್ವನಿಯೂ ಅನಧ್ಯಯನಕಾಲವೂ ಸಹ ತ್ಯಾಜ್ಯವು. ವಿದ್ಯಾರಂಭದಲ್ಲಿ ಈ ಹಿಂದೆ ಹೇಳಿದ ಕಾಲವೂ ಬುಧಾಸ್ತವು ತ್ಯಾಜ್ಯವು, ವಿವಾಹದಲ್ಲಿ ಪುರುಷನಿಗೆ ಜನ್ಮನಕ್ಷತ್ರವು ತ್ಯಾಜ್ಯವು ಮತ್ತು ಆ ಶುಭಗ್ರಹದ "ಶಲಾಕೆ" ಎಂಬ ದೋಷವೂ ಸಹ ತ್ಯಾಜ್ಯವಾದದ್ದು. ಗೃಹಾರಂಭದಲ್ಲಿ ಮತ್ತು ಗೃಹಪ್ರವೇಶದಲ್ಲಿ ದಗ್ಧ, ವೇಧ, ಜ್ವಾಲಾ ಇವುಗಳೂ ತ್ಯಾಜ್ಯಗಳು.

ದಿಕ್ಶೂಲಾಹ್ವಯ ತಾರಕಾಃಪರಿಹರೇದ್ವಾರಾಂಸ್ತಥಾಜನ್ಮಭಂಯಾತ್ರಾ
ಯಾಂಹಲಚಕ್ರಜಂಪರಿಹರೇದ್ವೇಧಂಕೃಷಿಪ್ರಕ್ರಮೇ ॥ ಬೀಜಾನಾಂ
ವಪನೇ ಚರಾಹುಜನಿತಂ ವೇಧಂ ಪ್ರತಿಷ್ಠಾಪನೇ ಚೌಲೇಚೋಪನ
ಯೇಭಿಷೇಚ ನವಿಧೌ ಯಾಮ್ಯಾಯನಂ ವರ್ಜಯೇತ್ ॥ ॥೫॥

**ಟಿ:** ಪ್ರಯಾಣದಲ್ಲಿ 'ದಿಕ್‌ಶೂಲವೆಂಬ' ನಕ್ಷತ್ರಗಳು, ದಿಕ್‌ಶೂಲ ವಾರಗಳೂ, ಜನ್ಮನಕ್ಷತ್ರವೂ, ತ್ಯಾಜ್ಯಗಳು. ಕೃಷ್ಯಾರಂಭದಲ್ಲಿ ಹಲಚಕ್ರದಿಂದ ಉಂಟಾದ ವೇಧವೂ, ಬೀಜ ಬಿತ್ತುವ ಕಾರ್ಯದಲ್ಲಿ ರಾಹುವಿನಿಂದುಂಟಾದ ವೇಧವೂ ತ್ಯಾಜ್ಯವು. ದೇವಪ್ರತಿಷ್ಠೆಯಲ್ಲೂ, ಚೌಲೋಪನಯನಗಳಲ್ಲೂ, ಪಟ್ಟಾಭಿಷೇಕದಲ್ಲೂ, ದಕ್ಷಿಣಾಯನವನ್ನು ಬಿಡತಕ್ಕದ್ದು.

**ಲಗ್ನಾತ್ಸ್ವಗ್ರಹತಾಂ ತ್ಯಜೇತ್ಪರಿಣಯೇ ದಾರೇ ಚ ಚಂದ್ರೋದಯಂ**
**ಬಾಲಸ್ಯೋಪನಯೇಷ್ಟಮೇಚ ನವಮೇ ಚೌಲೇಂಬರೇನ್ನಾಶನೇ ॥**
**ಆಯೇವಾರಿವಿಧೌವ್ಯಯೇಂಬುನಿಗೃಹೇ ಪಾಪಾಶ್ಚಲಗ್ನಾಸ್ತಗಾಃ ಪ-**
**ಚಾರ್ಯೈಃ ಸರ್ವವಿಧೌ ಸುರೇಡ್ಯ ಶಶಭೃತ್ಪಾಪಾಶ್ಚ ಮೃತ್ಯುಸ್ಥಿತಾಃ ॥ ೬॥**

**ಟಿ:** ವಿವಾಹದಲ್ಲಿ ಲಗ್ನಾತ್ ಸಪ್ತಮದಲ್ಲಿಗ್ರಹರಿರುವಿಕೆಯನ್ನೂ ಲಗ್ನದಲ್ಲಿ ಚಂದ್ರನಿರುವಿಕೆಯನ್ನೂ, ಬಿಡತಕ್ಕದ್ದು. ಬಾಲಕನ ಉಪನಯನದಲ್ಲಿ ಅಷ್ಟಮದಲ್ಲೂ, ಚೌಲದಲ್ಲಿ ನವಮದಲ್ಲೂ, ಅನ್ನಪ್ರಾಶನದಲ್ಲಿ ದಶಮದಲ್ಲೂ, ಪಟ್ಟಾಭಿಷೇಕದಲ್ಲಿ ಏಕಾದಶದಲ್ಲೂ, ಗೃಹಾರಂಭದಲ್ಲಿ ವ್ಯಯ, ಚತುರ್ಥಗಳಲ್ಲೂ, ಸಗ್ರಹತ್ವ (ಗ್ರಹರಿರುವಿಕೆ) ವನ್ನು ಬಿಡತಕ್ಕದ್ದು. ಎಲ್ಲಾ ಕಾರ್ಯಗಳಲ್ಲಿ ಲಗ್ನ ಹಾಗೂ ಸಪ್ತಮದಲ್ಲಿ ಪಾಪಗ್ರಹರಿರುವಿಕೆಯನ್ನೂ, ಅಷ್ಟಮದಲ್ಲಿ ಗುರು, ಚಂದ್ರ, ಪಾಪಗ್ರಹರಿರುವಿಕೆಯನ್ನೂ ಬಿಡತಕ್ಕದ್ದು.

**ವಾರೇಶಪ್ರಮುಖಾಗ್ರಹಾಶ್ಚ ದಿನಮಾನಾಷ್ಟಾಂಶ್ಚ ನಾಥಾಃ ಕ್ರಮಾತ್**
**ತದ್ವಾರಾದಿಪ ಪಂಚಮಾಧಿಪಮುಖಾ ರಾತ್ರ್ಯಷ್ಟ ಭಾಗಾಧಿಪಾಃ ॥**
**ತಸ್ಮಿನ್ ಸೂರ್ಯಸುತಾಂಶಕಸ್ತುಗುಳಿಕಃ ಪೂರ್ವಾತ್ರಯಾದ್ರಾಂತಕ**
**ಜ್ಯೇಷ್ಠಾವಹ್ನ್ಯರಗೋಡುಪಾಪದಿವಸಾಶ್ಛಿದ್ರಶ್ಚ ವರ್ಜ್ಯಾಗಣಾಃ॥**
**॥೭॥**

**ಟಿ:** ದಿವಾ ಪ್ರಮಾಣದ ಅಷ್ಟಮಾಂಶ (ದಿವಾಪ್ರಮಾಣ ೩೦ ಘಟಿ ಇರುವಾಗ ಒಂದೊಂದಂಶಕ್ಕೆ ೩।।ಘಟಿರೀತಿಯಂತೆ) ಗಳಿಗೆ ಆಯಾಯ ವಾರಾಧಿಪರೇ ಆದಿಯಾಗಿ ಅಧಿಪತಿಗಳಾಗುವರು. ರವಿವಾರ ಮೊದಲನೇ ೩।। ಘಟಿ ಗೆಸೂರ್ಯನೂ, ಎರಡನೇ ೩।। ಘಟಿಗೆ ಚಂದ್ರನೂ, ಹೀಗೆಯೇ ೩।। ಘಟಿಗಳಂತೆ ಕುಜಾದಿ ಗ್ರಹರಿಗೂ ತಿಳಿಯತಕ್ಕದ್ದು ರಾತ್ರಿಯಲ್ಲಾ

ದರೆ ಆ ವಾರಾಧಿಪತಿಯಿಂದ ಐದನೇ ವಾರಾಧಿಪತಿಯು ಮೊದಲನೇ ಅಂಶ
ಕ್ಕೆ ಅಧಿಪತಿಯಾಗುತ್ತಾನೆ. ರವಿವಾರ ರಾತ್ರಿಯು ಮೊದಲನೇ ಅಷ್ಟಮಾಂ
ಶಕ್ಕೆ ಗುರುವು ಅಧಿಪತಿಯಾಗುತ್ತಾನೆ. ಇವುಗಳಲ್ಲಿ ಯಾವ ಅಂಶಕ್ಕೆ
ಶನಿಯು ಅಧಿಪತಿಯಾಗುತ್ತಾನೋ ಆ ಅಂಶಕ್ಕೆ ಗುಳಿಕ ಅಥವಾ ಮಾಂದಿ
ಯೆನ್ನುವರು. ಪುಬ್ಬಾ. ಪೂರ್ವಾಷಾಢ, ಪೂರ್ವಾಭದ್ರ, ಭರಣಿ, ಜ್ಯೇಷ್ಠಾ,
ಕೃತ್ತಿಕಾ, ಆಶ್ಲೇಷಾ, ನಕ್ಷತ್ರಗಳೂ ಕುಜ, ಶನಿ, ರವಿ ವಾರಗಳೂ ಛಿದ್ರ
ತಿಥಿಗಳೂ ತ್ಯಾಜ್ಯಗಣಗಳು.

**ಶುಕ್ಲೇಸಾಗರ ಪನ್ನಗೇಶ ತಿಥಿಸಂಖ್ಯಾನಾಂ ತಿಥೀನಾಂ ಚತತ್**
**ಪೂರ್ವಾರ್ಸಾವುಸಿತೇತುವಿಷ್ಟಿರಪರಾರ್ಧಾರ್ಧಯೋಶ್ಚ ಕ್ರಮಾತ್ ॥**
**ಪ್ರೋಕ್ತೇತಾದ್ಯಹರಿನ್ನಖಾಂತ್ಯದಶಕೃಂತ್ಯಂತ್ಯಾದ್ಯನಾಡೀಷ್ವಿಷು ದ್ವ್ಯ**
**ಶ್ವಾಂಭೋಧಿಷಡಗ್ನಿನಾಗಶಶಿಸಂಖ್ಯಾಶಾಸುಚಾನಿಷ್ಟದಾ ॥ ॥೮॥**

**ಟೀ:** ವಿಷ್ಟ್ಯುದಯವನ್ನು ತಿಳಿಸುತ್ತಾನೆ— ಶುಕ್ಲಪಕ್ಷದಲ್ಲಿ ಚತುರ್ಥಿಯು
ಅಪರಾರ್ಧದ ಆದಿಘಟಿಯಲ್ಲಿ ಪಶ್ಚಿಮದಿಕ್ಕಿನಲ್ಲಿಯೂ ಅಷ್ಟಮಿಯು
ಪೂರ್ವಾರ್ಧದ ೧೧ನೇ ಘಟಿಯಲ್ಲಿ ಆಗ್ನೇಯದಿಕ್ಕಿನಲ್ಲೂ, ಏಕಾದಶಿಯು
ಅಪರಾರ್ಧದ ೨೦ನೇ ಘಟಿಯಲ್ಲಿ ಉತ್ತರದಿಕ್ಕಿನಲ್ಲೂ, ಹುಣ್ಣಿಮೆಯು
ಪೂರ್ವಾರ್ಧದ ಅಂತ್ಯಘಟಿಯಲ್ಲಿ ನೈರುತ್ಯದಿಕ್ಕಿನಲ್ಲೂ "ವಿಷ್ಟಿ"ಯು ಉದ-
ಯಿಸುತ್ತದೆ. ಇನ್ನು ಕೃಷ್ಣಪಕ್ಷದಲ್ಲಿ ತದಿಗೆಯು ಅಪರಾರ್ಧದ ೧೧ನೇ
ಘಟಿಯಲ್ಲೂ ಸಪ್ತಮಿಯು ಪೂರ್ವಾರ್ಧದ ೨೧ನೆಯ ಘಟಿಯಲ್ಲಿ ಪಶ್ಚಿಮ
ದಿಕ್ಕಿನಲ್ಲೂ. ದಶಮಿಯು ಅಪರಾರ್ಧದ ಅಂತ್ಯಘಟಿಯಲ್ಲಿ ಈಶಾನ್ಯದಿಕ್ಕಿನ
ಲ್ಲೂ, ಚತುರ್ದಶಿಯು ಪೂರ್ವಾರ್ಧದ ಆದಿಘಟಿಯಲ್ಲಿ ಪೂರ್ವ ದಿಕ್ಕಿನಲ್ಲೂ.
"ವಿಷ್ಟಿ"ದೋಷವು ಉದಯಿಸುತ್ತದೆ.

**ತ್ರಿಂಶತ್ತ್ಯಂತಮಘಾದಿತಿ ಷ್ವಗಯುಗಂ ಶೂರ್ವಾನಿಲೇಂದ್ರೇಂದುಭೇ**
**ಭಾದ್ರೇಷ್ಟಿರ್ದಶಮಿತ್ರ ವಿಷ್ಣುವಸುಭೇ ತತ್ತ್ವಂ ದ್ವಿಬಾಧ್ಯಾಂಬಾದೇ॥**
**ಹಸ್ತಾಹ್ಯಶ್ವಿಶಿವೇಷುಚೇಧ್ಮದಶನಾರ್ಕೇಧ್ಮಾಭಗಾಬ್ಧ್ಯೇರ್ಧೃತಿಶ್ಚತ್ರಾ-**
**ರಿಂಶದಜೇಕೃತಿಸ್ತದಪರೇ ಷ್ವೇಭ್ಯೋಽಬ್ಧಿನಾಡ್ಯೋವಿಷಂ ॥ ॥೯॥**

**ಟೀ:** ವಿಷಘಟಿಗಳು—ಕೃತ್ತಿಕೆ, ರೇವತಿ, ಮಘಾ, ಪುನರ್ವಸು ಈ ನಕ್ಷತ್ರಗಳು

೩೦ ಘಟಿನಂತರ, ವಿಶಾಖಾ, ಸ್ವಾತಿ, ಜ್ಯೇಷ್ಠ, ಮೃಗಶಿರ, ಇವುಗಳು ೧೪ ಘಟಿ ನಂತರ, ಪೂರ್ವಾಭದ್ರೆಯು ೧೬ ಘಟಿ ನಂತರ ಅನುರಾಧಾ, ಶ್ರವಣ ,ಧನಿಷ್ಠಾ ನಕ್ಷತ್ರಗಳ ೧೦ ಘಟಿಯ ನಂತರ ಭರಣಿ ಉತ್ತರಾಭದ್ರಾ ಪೂರ್ವಾಷಾಢಾ ನಕ್ಷತ್ರಗಳ ೨೪ ಘಟಿ ನಂತರ ಹಸ್ತ ನಕ್ಷತ್ರದ ೨೧ಘಟಿಯ ನಂತರ ಆಶ್ಲೇಷೆಯ ೩೨ ಘಟಿಯನಂತರ ಅಶ್ವಿನಿಯ ೫೦ ಘಟಿಯ ನಂತರ ಆರ್ದ್ರಾ ನಕ್ಷತ್ರದ ೨೧ ಘಟಿಯ ನಂತರ ಉತ್ತರಾ, ಶತಭಿಷಗಳ ೧೮ ಘಟಿಯ ನಂತರ, ರೋಹಿಣಿಯ ೪೦ ಘಟಿಯ ನಂತರ, ತಿಷ್ಯ ಹುಬ್ಬಾ ಚಿತ್ರಾ, ಮೂಲ, ಉತ್ರಾಷಾಢ ಇವುಗಳ ೨೦ ಘಟಿನಂತರ ೪ಘಟಿಗಳು ವಿಷಘಟಿಗಳೆನ್ನಿಸಲ್ಪಡುವವು.

**ಅಶ್ವಿನ್ಯಾದ್ಯನಿಲಾಂ ತಭೇಷ್ವಸಿತದಾದ್ಯಂತ್ಯ ದ್ವಿತೀಯಾಂಶಕ ಪ್ರಾಂತೇಂ ಶಾರ್ಧಶರಾಂಕಸಂಖ್ಯಘಟಿಕಾ ಸ್ವಾತ್ಯರೇಷು ಶೂರ್ಪಾದಿಷು ॥ ಆದ್ಯಂಶಸ ಮುಖೇತುರೀಯಯುಗಳಾಂ ಶಾಂತೇತಥಾಷ್ಟಾಷ್ಟದಿಙ್ ನಾಡ ಶ್ಯೋಷ್ಣಶಿಖಾಹ್ವಯಾಃ ಶುಭವಿಧೌ ತ್ಯಾಜ್ಯಾಃ ಕ್ರಮಾದ್ಯತ್ನತಃ ॥**
**॥೧೦॥**

**ಟೀ:** ಉಷ್ಣಶಿಖೆ–ಅಶ್ವಿನಿಯ ಆದಿಚರಣದ ಅಂತ್ಯದ ಅರ್ಧಭಾಗವು. ಭರಣಿಯು ನಾಲ್ಕನೇ ಪಾದದ ಅಂತ್ಯದ ೫ಘಟಿಗಳೂ, ಕೃತ್ತಿಕೆಯು ೨ನೇಪಾದದ ಅಂತ್ಯದ ೯ಘಟಿಗಳೂ, (ರೋಹಿಣಿ ಅಶ್ವಿನಿಯಂತೆ ಮೃಗಶಿರೆಯು ಭರಣಿಯಂತೆ, ಆರ್ದ್ರೆಯು ಕೃತ್ತಿಕೆಯಂತೆ, ಪುನಃ ಪುನರ್ವಸು ಅಶ್ವಿನಿಯಂತೆ, ತಿಷ್ಯ ಭರಣಿಯಂತೆ. ಆಶ್ಲೇಷೆ ಕೃತ್ತಿಕೆಯಂತೆ, ಮಘೆಯು ಅಶ್ವಿನಿಯಂತೆ. ಹುಬ್ಬೆಯು ಭರಣಿಯಂತೆ, ಉತ್ತರೆಯು ಕೃತ್ತಿಕೆಯಂತೆ. ಹಸ್ತವು ಅಶ್ವಿನಿ ಚಿತ್ರೆಯು ಭರಣಿಯಂತೆ, ಸ್ವಾತಿಯು ಕೃತ್ತಿಕೆಯಂತೆ.) "ಉಷ್ಣಶಿಖೆ" ಯೆಂಬದೋಷಯುಕ್ತಗಳು ವಿಶಾಖೆಯ ಆದಿಪಾದದ ಆದಿಯ ೮ ಘಟಿಗಳೂ ಅನುರಾಧೆಯ ೪ನೇ ಪಾದದ ಅಂತ್ಯದ ೮ ಘಟಿಗಳೂ ಜ್ಯೇಷ್ಠೆಯ ೨ನೇಪಾದದ ಅಂತ್ಯದ ೧೦ ಘಟಿಗಳೂ (ಮೂಲ ವಿಶಾಖೆಯಂತೆ ಪೂರ್ವಾಷಾಢ ಅನುರಾಧೆಯಂತೆ ಉತ್ರಾಷಾಢ ಜ್ಯೇಷ್ಠೆಯಂತೆ ಶ್ರವಣ, ವಿಶಾಖೆಯಂತೆ. ಧನಿಷ್ಠಾ ಅನುರಾಧೆಯಂತೆ ಶತಭಿಷೆ ಜ್ಯೇಷ್ಠೆಯಂತೆ, ಪೂರ್ವಾಭದ್ರೆ ವಿಶಾಖೆಯಂತೆ. ಉತ್ರಾಭದ್ರ, ಅನುರಾಧೆಯಂತೆ, ರೇವತಿ ಜ್ಯೇಷ್ಠೆಯಂತೆ) ಉಷ್ಣಶಿಖೆಗಳು.

**ಚಕ್ರಾರ್ಧೇದ್ವಿಗುಣಾಯನಾಂಶಹಿತೇಭೂಯಃಸ್ಫುಟಾರ್ಕ್ರೋನ್ವಿತೇ ಶಿಷ್ಟಂ ತತ್ಕಥಯಂ ತಿತೌ.ನ್ಯೃಷಯಶ್ಚಕ್ರಾರ್ಧಯೋಗಾಹ್ವಯಂ ॥ ಯ್ಯಾವನ್ಮೂಲಭಮರ್ಕಭಾದ್ಭವತಿ ತತಾವತ್ತತೋಽವಾಪರೇ ತತ್ಕಾಲಂ ಕರಣಾಸಿದ್ಧಗಣಿತೇ ನಾನ್ಯೇ ವಿನಿಸ್ಚಿನ್ವತೇ ॥ ॥೧೧॥**

**ಟಿ;** ಚಕ್ರಾರ್ಧಯೋಗ ಆರು ರಾಶಿಯಲ್ಲಿ ೨ರಿಂದ ಗುಣಿಸಲ್ಪಟ್ಟ ಅಯನಾಂಶವನ್ನು ಕಳೆದುಳಿದಿದ್ದರಲ್ಲಿ ತಾತ್ಕಾಲಿಕ ಸೂಯಸ್ಫುಟವನ್ನು ಸಹ ಕಳೆದುಳಿದದ್ದು ಯಾವ ತಾಳೆಯು ಬರುತ್ತದೋ ಅದಕ್ಕೆ ಚಕ್ರಾರ್ಧಯೋಗವೆನ್ನುವರು. ಕೆಲವರು ತಾತ್ಕಾಲಿಕ ಸೂರ್ಯನಕ್ಷತ್ರ (ಮಹಾನಕ್ಷತ್ರ)ದಿಂದ ಮೂಲಾನಕ್ಷತ್ರವು ಎಷ್ಟೆಷ್ಟನೇದಾಗುತ್ತದೋ ಆ ಮೂಲಾನಕ್ಷತ್ರದಿಂದ ಪುನಃ ಅಷ್ಟನೇ ನಕ್ಷತ್ರಕ್ಕೆ "ಚಕ್ರಾರ್ಧ"ಯೋಗವೆನ್ನುವರು. ಕೆಲವರು ಆ ಪಾತ ಸಂಜ್ಞಿತವಾದ ಚಕ್ರಾರ್ಧಯೋಗದ ಪ್ರವೇಶ ನಿರ್ಗಮಗಳನ್ನು ತಂತ್ರ ಸಿದ್ಧಾಂತಾದಿ ಗಣಿತದಿಂದ ನಿಶ್ಚೈಸಿಕೊಳ್ಳುವರು.

**ಸೂರ್ಯಾದ್ಯೈಃ ಖಚರೈಃ ಸಹೈಕಭವನೇ ನಕ್ಷತ್ರವೇಕಂವಿಶನ್ ಇಂದುಃ ಸಂಗ್ರಹಸಂಜ್ಞಿತೋ ಭವತಿ ಸತ್ಯಾಜ್ಯೋತ್ರದೋಷೋ ಮಹಾನ್ ॥ [ಚಂದ್ರಾಬ್ದಾವಸಿತೌ ಚ ಪಂಚದಿವಸಾಃ ಸಪ್ತಾರ್ಕ ಸಂವತ್ಸರ ಪ್ರಾಂತೇಚಾಥಮುಖೇ ತಯೋಸ್ತ್ರಿದಿವಸಾ ವರ್ಜ್ಯಾ ವಿಧೌ ಚಾಖಿಲೇ ॥ ॥೧೨॥**

**ಟಿ:** ಒಂದು ರಾಶಿಯಲ್ಲಿ ಒಂದೇ ನಕ್ಷತ್ರದಲ್ಲಿ ಚಂದ್ರನು ಇತರ ಸೂರ್ಯಾದಿ ಗ್ರಹರಿಂದ ಯುಕ್ತನಾದರೆ ಸಗ್ರಹವೆಂಬ ಮಹಾದೋಷವುಂಟಾಗುವದು. ಸಮಸ್ತ ಶುಭಕಾರ್ಯದಲ್ಲಿ ಚಾಂದ್ರ ಸಂವತ್ಸರದ ಅಂತ್ಯ (ಫಾಲ್ಗುಣ ಮಾಸದ) ದಲ್ಲಿ ೫ ದಿವಸಗಳನ್ನು ಸೌರ ಸಂವತ್ಸರದ ಅಂತ್ಯದಲ್ಲಿ (ಮೀನ ಮಾಸ) ೭ ದಿವಸಗಳನ್ನು ತ್ಯಾಜ್ಯ ಮಾಡತಕ್ಕದ್ದು. ಆ ಚಾಂದ್ರ ಸೌರ ಸಂವತ್ಸರಗಳ ಆದಿಯಲ್ಲಿ ೩ ದಿವಸಗಳು ತ್ಯಾಜ್ಯಗಳು.

**ಕರ್ತ್ರುರ್ಜನ್ಮಮುಖಂಚ ತಾರನವಕಂ ಸ್ಯಾಜ್ಜನ್ಮ ಸಂಪದ್ವಿಪತ್ಕ್ಷೇಮಃ ಪ್ರತ್ಯರಸಾಧಗಾವಪಿವಧೋ ಮೈತ್ರಂ ಪರಂಚ॥ ಇತ್ಯೇವಂ ಪುನರಸ್ಯ ದೃಕ್ಷ ನವಕಂ ಚಾನ್ಯಂ ಚ ತಸ್ಮಿನ್ವಿಪತ್ ತ್ಯಾಜ್ಯಂಪ್ರತ್ಯರಭಂವಧೋಷ್ಟಮಗೃಹಾಕ್ಷ್ಣಿತ್ರಯೋವಿಂಶಭಂ ॥ ॥೧೩॥**

ಟಿ: ಯಜಮಾನನ ಜನ್ಮನಕ್ಷತ್ರದಿಂದಾರಂಭಿಸಿ ಜನ್ಮಸಂಪತ್ ವಿಪತ್ಕ್ಷೇಮ ಪ್ರತ್ಯರ,ಸಾಧಕ,ವಧ ಮೈತ್ರ,ಪರಮಮೈತ್ರ ಹೀಗೆ ೯ನಕ್ಷತ್ರಗಳಿಗೆಸಂಜ್ಞೆಗಳು ಪುನಃ ೧೦ನೇ ನಕ್ಷತ್ರವು ಜನ್ಮನಕ್ಷತ್ರವೆನಿಸುವದು. ೧೧ನೇದು ಸಂಪತ್. ಹೀಗೆ ೧೮ನಕ್ಷತ್ರಗಳ ನಂತರ ೧೯ನೇ ನಕ್ಷತ್ರವು ಜನ್ಮ ಇತ್ಯಾದಿಯಾಗಿ ಮೂರೂ ಪರ್ಯಾಯಗಳಲ್ಲಿ ತಿಳಿಯುವದು. ಜನ್ಮಾದಿ ನವಕದಲ್ಲಿ ವಿಪತ್ ಪ್ರತ್ಯರ, ವಧ. ಜನ್ಮರಾಶಿಯಿಂದ ಅಷ್ಟಮರಾಶಿ ಸಂಬಂಧವಾದ ನಕ್ಷತ್ರಗಳು. ಜನ್ಮನಕ್ಷತ್ರದಿಂದ ೨೨ನೇ ನಕ್ಷತ್ರವು ಸಹ ತ್ಯಾಜ್ಯವು.

**ಶುಕ್ರೋಽಸ್ತೇಽರವಿಜಃಸುತೇಽರವಿರಹಿರ್ವಾಽಂತ್ಯೇಬುಧಃಖೇಗುರುರ್ಗ್ಲೌರ್ವಾ-**
**ಷ್ಟಕ್ಷತಯೋರ್ಗರ್ರೌ ಧರಣಿಜಃ ಸ್ಯಾತ್ತದ್ಗೃಹಂಮೃತ್ಯುದಂ ॥ ಚಿತ್ರಾ**
**ಶೂರ್ಪ ವೃಷಾಂಬು ವಿಷ್ಣುವರುಣಾಹಿರ್ಬುಧ್ನ್ಯದಸ್ರಾಂತಕಾ ಜೇಶಾ**
**ದಿತ್ಯುಡವಃ ಸಮಾರ್ಧಮೃತಿದಾಮೇಷಾದಿ ಮಾಸ್ಯೈರ್ಯುತಾಃ ॥ ॥೧೪॥**

ಟಿ: ಯಾವ ರಾಶಿಯು ಸಪ್ತಮದಲ್ಲಿ ಶುಕ್ರನೂ, ಪಂಚಮದಲ್ಲಿ ಶನಿಗಳೂ-ದ್ವಾದಶದಲ್ಲಿ ರವಿಯಾಗಲೀ, ರಾಹುವಾಗಲೀ, ದಶಮದಲ್ಲಿ ಬುಧನೂ, ಅಷ್ಟಮ ಷಷ್ಠಗಳಲ್ಲಿ ಗುರುವಾಗಲೀ ಚಂದ್ರನಾಗಲೀ ನವಮದಲ್ಲಿ ಕುಜನೂ ಇರುವರೋ ಆ ರಾಶಿಯು ಮರಣವನ್ನುಂಟುಮಾಡುವದು. ಮೇಷ ಮಾಸದ ಚಿತ್ರಾನಕ್ಷತ್ರವೂ, ವೃಷಭಮಾಸದ ವಿಶಾಖೆಯು. ಮಿಥುನಮಾಸದ ಜ್ಯೇಷ್ಠೆಯೂ, ಕರ್ಕಟಮಾಸದ ಪೂರ್ವಾಷಾಢಾ ನಕ್ಷತ್ರವೂ, ಸಿಂಹ ಮಾಸದ ಶ್ರವಣವೂ, ಕನ್ಯಾಮಾಸದ ಶತಭಿಷೆಯೂ, ತುಲಾಮಾಸದ ಉತ್ತರಾಭದ್ರೆಯೂ, ವೃಶ್ಚಿಕಮಾಸದ ಅಶ್ವಿನಿಯೂ, ಧನುರ್ಮಾಸದ ಭರಣಿಯೂ, ಮಕರಮಾಸದ ರೋಹಿಣಿಯೂ, ಕುಂಭಮಾಸದ ಆರ್ದ್ರಾನಕ್ಷತ್ರವು, ಮೀನಮಾಸದ ಪುನರ್ವಸು ನಕ್ಷತ್ರವೂ ಸಹ ಪೂರ್ವಾರ್ಧದಲ್ಲಿ (೬ತಿಂಗಳೊಳಗೆ) ಮರಣ ಕೊಡುವಂಥವುಗಳು.

**ಚಂದ್ರಾದಿ ಸ್ಫುಟಖೇಟ ಸೂರ್ಯವಿವರೋತ್ಥಾಂಶಾಯುದೋರ್ನಾಧಿ-**
**ಕಾಃ ಸೂರ್ಯಾತ್ಯಷ್ಟಿಸವಿಶ್ವ ರುದ್ರನವತಿಥ್ಯಶ್ವೈಸ್ತದಾಸ್ತೋದಯಾಃ ॥**
**ಜ್ಞೇಯಾಸ್ತದ್ಗಣಿತೇನಮಾತ್ಕಭೃಗುಜಸ್ಯಾಸ್ತದ್ವಯೋಸ್ತೇಗುರೋಃ ಪೂ-**
**ರ್ತ್ತಂ ಸಪ್ತದಿನಾನಿಚೋರ್ಧ್ವಮುದಯಾತ್ಪಂಚಾಸ್ಯಹಾನಿತ್ಯಜೇತ್॥**
**॥೧೫॥**

**ಟಿ:** ಸೂರ್ಯಚಂದ್ರರ ಸ್ಫುಟದ ಅಂತರವು ೧೨ಅಂಶದೊಳಗಾದರೆ ಚಂದ್ರಾಸ್ತವೆನಿಸುವದು. ೧೨ಅಂಶಮಿಕ್ಕಿದ್ದಲ್ಲಿ ಉದಯವೆನಿಸುವದು. ಇದರಂತೆ ಸೂರ್ಯಕುಜರ ಅಂತರವು ೧೭ಅಂಶದಲ್ಲೂ, ಸೂರ್ಯಶುಕ್ರರಲ್ಲಿ ೯ ಅಂಶದಲ್ಲೂ, ಸೂರ್ಯಶನಿಗಳಲ್ಲಿ ೧೫ಅಂಶದಲ್ಲೂ ಅಸ್ತೋದಯವೆಂದು ತಿಳಿಯತಕ್ಕದ್ದು. ಈ ಅಸ್ತೋದಯಗಳಲ್ಲಿ ಶುಕ್ರನ ಪೂರ್ವ ಪಶ್ಚಿಮ ಅಸ್ತಗಳಲ್ಲೂ ಗುರುವಿನ ಪಶ್ಚಾತ್ ಅಸ್ತದಲ್ಲೂ ಅಸ್ತಕ್ಕಿಂತ ಪೂರ್ವದಲ್ಲಿ ಏಳುದಿನಗಳನ್ನೂ ಉದಯಕ್ಕಿಂತ ಮುಂದೆ ಐದು ದಿನಗಳನ್ನೂ ತ್ಯಜಿಸತಕ್ಕದ್ದು.

**ಮಧ್ಯೇ ಸಂಕ್ರಮಯೋರ್ದ್ವಿನೇಶಶಶಿನೋರ್ಯೋಗದ್ವಯಂ ಸ್ಯಾತ್ತದಾ**
**ತ್ಯಾಜ್ಯಃ ಸೋಧಿಕಮಾಸ ಏವ ಸಿತಪಕ್ಷೈಕಾದಶೀ ಪೂರ್ವಕಾಃ ॥**
**ಆಷಾಢಸ್ಯ ಚ ಕಾರ್ತ್ತಿಕಸ್ಯ ವಿಶದೇ ಪಕ್ಷೇ ತಥಾ ದ್ವಾದಶೀ ತಿಥ್ಯಂತಾಃ**
**ಶಯನಾಹ್ವಯಾಃ ಶುಭಹರಾ ಮಾಸಾಶ್ಚತುಃ ಸಂಖ್ಯಕಾಃ ॥ ॥೧೬॥**

**ಟಿ:** ಎರಡು ಸಂಕ್ರಾಂತಿಗಳ ಮಧ್ಯದಲ್ಲಿ ಎರಡು ಅಮಾವಾಸೆಗಳಾದದ್ದರಲ್ಲಿ, ಅವುಗಳಲ್ಲಿ ಮೊದಲನೇ ಪ್ರತಿಪದಾದಿ ದರ್ಶಾಂತಮಾಸಕ್ಕೆ ಅಧಿಕಮಾಸವೆನ್ನುವರು. (ಅಸಂಕ್ರಾಂತಿ ಮಾಸ) ಇದು ತ್ಯಾಜ್ಯ ಮಾಸವು. ಆಷಾಢ ಶುಕ್ಲೈಕಾದಶಿಯಿಂದ ಕಾರ್ತೀಕಶುಕ್ಲ ೧೨ರವರೆಗಾಗುವ ೪ತಿಂಗಳಿಗೆ ಶಯನ ಮಾಸಗಳೆನ್ನುವರು. ಇವು ಮಂಗಲ ವಿಘಾತಕಗಳು.

**ವಿಶ್ವೇಂದೂ ಭಗಪೌಷ್ಣಭೇಪಿತೃಹರೀಬುಧ್ನ್ಯಾರ್ಕಭೇಚಾಭಿಜಿತ್ ರೋ**
**ಹಿಣ್ಯಾಯು ಮವೈತ್ರಭೇಶತಭಿಷಕ್ ಸ್ವಾತ್ಯಾ ಚ ಮೂಲಾದಿತೀ ॥**
**ಪ್ರತ್ಯೇಕಂತು ಹಿನಾಂಶು ಭೇಟಸಹಿತೌ ಸ್ಯಾತಾಂಯಧಾಚೇತ್ತದಾ**
**ತತ್ತಾರಂ ನಿಯಮಾತ್ತ್ಯ ಚೇತ್ಪರಿಣಯೋವೇ ಧಾಚ್ಛಲಾಕಾಹ್ವಯಃ॥**
**॥೧೭॥**

**ಟಿ॥** ಶಲಾಕಯೋಗ-ಉತ್ತರಾಷಾಢಾ ಮೃಗಶಿರೆಗಳು ಉತ್ತರಾ ರೇವತಿಗಳು ಮಘಾಶ್ರವಣಗಳು, ಉತ್ತರಾಭದ್ರಾ-ಹಸ್ತಗಳು, ಅಭಿಜಿತ್-ರೋಹಿಣಿಗಳು, ಭರಣಿ-ಅನುರಾಧಾನಕ್ಷತ್ರಗಳು, ಶತಭಿಷ ಸ್ವಾತಿಗಳು ಮೂಲ-ಪುನರ್ವಸುಗಳು ಇವುಗಳ ಯುಗ್ಮಗಳಲ್ಲಿ ಯಾವುದಾದರೊಂದರಲ್ಲಿ ಚಂದ್ರನೂ, ಇನ್ನೊಂದರಲ್ಲಿ ಇತರ ಯಾವುದೇ ಗ್ರಹರಾದರೂ ಇರುವಲ್ಲಿ ಅದು ವೇಧ

ವಾಗುವದರಿಂದ ಈ "ಶಲಾಕಾ" ಎಂಬ ದೋಷವನ್ನು ವಿವಾಹದಲ್ಲಿ ನಿಶ್ಚಯವಾಗಿಬಿಡತಕ್ಕದ್ದು.

**ಅರ್ಧಕರ್ಕ್ಷಣಿಹರಾ ಬ್ಧ್ಯಜಾರ್ಕಮೂರಜಿತ್ ಸ್ವಾತ್ಯೋಗ್ನಿವಿ ಶ್ವಪ್ರಸೂ ಭಾದ್ರೇಂದ್ರಾಗ್ನಿ ಭಗಾಸ್ತ್ರಥಾರ್ಯಮಪಯೋ ಬುಧ್ಯಾ್ಯರ್ಯ ವಿತ್ರಾಂ-ತಕಾಃ ॥ ದಸ್ರಾಂತ್ಯೋರಗಶಕ್ರನೈರ್ಋತ ಮಖಾ ವರ್ಗಾಃ ಸಭೇಟಾಶ್ಚೇತ್ ಶದ್ವರ್ಗಾ ಗತತಾರಕಾಶ್ಚ ವಿಸೃಜೇದ್ಗೇಹಾದಿಕಾರಂಭಣೇ॥೧೮॥**

**ಟೀ:** ಗೃಹಾರಂಭಾದಿಗಳಲ್ಲಿ ತ್ಯಾಜ್ಯಗಳಾದ ವೇಧನಕ್ಷತ್ರಗಳು ಮೃಗಶಿರ, ಚಿತ್ರಾ, ಧನಿಷ್ಠೆಗಳು(೧) ಆದ್ರಾ್ಗ. ಶತಭಿಷೆ. ರೋಹಿಣಿ, ಹಸ್ತ, ಶ್ರವಣ ಸ್ವಾತಿಗಳು, (೨) ಕೃತ್ತಿಕಾ, ಉತ್ತರಾಷಾಢ, ಪುನರ್ವಸು. ಪೂರ್ವಾಭದ್ರ, ವಿಶಾಖಾ, ಉತ್ತರೆಗಳು (೩) ಹುಬ್ಬಾ, ಪೂರ್ವಾಷಾಢ, ಉತ್ತರಾಭದ್ರ, ತಿಷ್ಯ. ಅನುರಾಧಾ, ಭರಣಿಗಳು (೪) ಅಶ್ವಿನಿ, ರೇವತಿ, ಆಶ್ಲೇಷಾ. ಜ್ಯೇಷ್ಠಾ, ಮೂಲಾ, ಮಘಾ. ಈ ನಕ್ಷತ್ರಗಳು (೫) ಹೀಗೆ ೫ ವರ್ಗಗಳು ಯಾವದಾದರೊಂದು ವರ್ಗದಲ್ಲಿ ಗ್ರಹರಿದ್ದರೆ ಆವರ್ಗದ ನಕ್ಷತ್ರಗಳು ಮತ್ತು ದಗ್ಧ ಜ್ವಾಲಾದಿಗಳು ಇವುಗಳನ್ನೆಲ್ಲಾ ಗೃಹಾರಂಭಾದಿಗಳಲ್ಲಿ ಬಿಡತಕ್ಕದ್ದು.

**ಭಾಸ್ವನ್ಮಂದಕುಜೈಶ್ಚಮುಕ್ತಭವನಂ ದಗ್ಧಂತದಾರೂಢಭಂ ವಿಜ್ಞೇಯಂಜ್ವಲಿತಂಯಿಯಾಸಿತಗೃಹಂ ಧೂಮಾಯಮಾನಾಹ್ವಯಂ ॥ ಪ್ರಾಜಾಪತ್ಯಮಘಾರ್ಯಮಾಗ್ನಿದಿನಕೃನ್ಮೂಲೇಷುಭೌಮೋ ತೇ ಜ್ವಾಲಾಚಾಷ್ಟಿನಗಾಬ್ಧಿತತ್ವನುಭಂ ವರ್ಜ್ಯಂ ಗೃಹಾದೌಕುಜಾತ್ ॥೧೯॥**

**ಟೀ:** ರವಿ, ಶನಿ, ಅಂಗಾರಕರಿಂದ ಬಿಡಲ್ಪಟ್ಟರಾಶಿ (ಇವರುರುವ ರಾಶಿಯ ಹಿಂದಿನ ರಾಶಿ)ಗೆ ದಗ್ಧ ರಾಶಿಯೆಂದೂ ಅದೇ ಗ್ರಹರಿರುವರಾಶಿಗೆ ಜ್ವಲಿತ ರಾಶಿಯೆಂದೂ, ಮುಂದೆ ಹೋಗಲಿರುವ ರಾಶಿಗೆ ಧೂಮಾಯ ಮಾನ ರಾಶಿಯೆಂದೂ ಅನ್ನುವರು. ಕುಜನು. ರೋಹಿಣಿ, ಮಘಾ, ಹುಬ್ಬಾ, ಕೃತ್ತಿಕಾ, ಮೂಲ ಈ ನಕ್ಷತ್ರಗಳಲ್ಲಿದ್ದರೆ ಜ್ವಾಲಾ ಎಂಬ ಯೋಗ ಉಂಟಾಗುವದು. ಮತ್ತು ಅಂಗಾರಕನಿರುವ ನಕ್ಷತ್ರದಿಂದ ೧೬-೭-೪-೨೪-೧೪ನೇ ನಕ್ಷತ್ರಗಳು ಜ್ವಾಲಾನಕ್ಷತ್ರಗಳು ಗೃಹಾರಂಭಾದಿಯಲ್ಲಿ ಇವುಗಳನ್ನು ತ್ಯಜಿಸತಕ್ಕದ್ದು.

ಯಾತ್ರಾಯಾಂಯಮಸೋಮಯೋಶ್ಚದಿವಸೇಪ್ರಾಚೀಂಪ್ರಜೇನ್ನೇಂ
ದ್ರಭೇ ಪೂರ್ವಾಭಾದ್ರಪದೇಗುರೋರಪಿದಿನೇಯಾಯಾನ್ನಯಾಮ್ಯಾಂ
ದಿಶಂರೋಹಿಣ್ಯಾಮಪಿವಾಸರೇರ್ಕಸಿತಯೋರ್ನಾಶಾವಿಶೇದ್ವಾರುಣೀಂ
ವಾ ರೇಚಂದ್ರಜಭೌಮಯೋಶ್ಚಭಗಭೇಯಾಯಾದ್ದಿಶಂಸೋತ್ತರಾಂ
॥೨೦॥

ಟಿ: ಪ್ರಯಾಣಕ್ಕೆನಿಷಿದ್ಧಯೋಗ-ಶನಿ ಚಂದ್ರ-ವಾರಗಳಲ್ಲಿ ಜ್ಯೇಷ್ಠಾ ನಕ್ಷತ್ರ ವಿದ್ದಾಗ ಪೂರ್ವ ದಿಕ್ಕಿಗೂ ಗುರುವಾರ ಪೂರ್ವಾಭದ್ರಾ ನಕ್ಷತ್ರ ಯೋಗದಲ್ಲಿ ದಕ್ಷಿಣದಿಕ್ಕಿಗೂ ರವಿ ಶುಕ್ರವಾರ ದಿವಸ ರೋಹಿಣಿ ಇರುವಾಗ ಪಶ್ಚಿಮ ದಿಕ್ಕಿಗೂ ಬುಧ ಕುಜವಾರ ಉತ್ತರಾನಕ್ಷತ್ರಯೋಗಗಳಲ್ಲಿ ಉತ್ತರದಿಕ್ಕಿಗೂ ಪ್ರಯಾಣಮಾಡಬಾರದು.

ಅರ್ಕಾಕ್ರಾಂತಗತಾಗತಾಗತಾನ್ಯನಡುಹಾಂ ನಾಶಾಯಭಾನ್ಯಗ್ರತೋವೃ
ದ್ಧ್ಯೈಭತ್ರಿತಯಂತತಕೃಷಿಕೃದ್ವಾತಾಯ ಶೂಲತ್ರಯೇ ॥ ತಾರಾಣಾಂ
ನವಕಂತದಂತರಗತೇ ಸ್ಯಾತ್ಸಂಪ್ರಿಯೈಪಂಚಕೇ ಯಚ್ಛಾನ್ಯತ್ರಿತಯಂ
ತದತ್ರಶುಭದಂಚಕ್ರೇಸ್ಮೃತಂಲಾಂಗಲೇ ॥ ॥೨೧॥

ಟಿ: ಹಲಚಕ್ರ- ಈ ಲಾಂಗಲವೆಂಬ ಚಕ್ರದಲ್ಲಿ ಸೂರ್ಯನಿರುವ ನಕ್ಷತ್ರದ ಹಿಂದಿನ, ಸೂರ್ಯನಿರುವ ಸೂರ್ಯನಿರುವ ನಕ್ಷತ್ರದಮುಂದಿನ ಈ ಮೂರು ನಕ್ಷತ್ರಗಳು ಎತ್ತುಗಳನ್ನು ನಾಶ ಮಾಡುವುದು. ಈ ಮೂರರ ಮುಂದಿನ ಮೂರು ನಕ್ಷತ್ರಗಳು ವೃದ್ಧಿಗೆ ಕಾರಣಗಳು. ಮುಂದೆ ಶೂಲತ್ರಯದಲ್ಲಿರುವ ಒಂಬತ್ತು ನಕ್ಷತ್ರಗಳು ಕೃಷಿ ಮಾಡುವವನನ್ನು ನಾಶಮಾಡುವಂಥಾದ್ದು. ಈ ಶೂಲತ್ರಯಗಳ ಮಧ್ಯದಲ್ಲಿರುವ ಐದು ನಕ್ಷತ್ರಗಳು ಸಂಪತ್ತಿಗೆ ಕಾರಣಗಳು ಅವಶಿಷ್ಟ ಮೂರು ನಕ್ಷತ್ರಗಳು ಶುಭಕರವು. ಸೂರ್ಯನು ಬಿಟ್ಟ ನಕ್ಷತ್ರ ಹಿಡಿದು ೩ನಕ್ಷತ್ರ ಅಶುಭ ಪುನಃ ೩ನಕ್ಷತ್ರ ಶುಭ ಪುನಃ ೩ ಅಶುಭ ಪುನಃ ೫ ಶುಭ ಮುಂದೆ ೩ ಅಶುಭ ಪುನಃ ೫ ಶುಭ ೩ಅಶುಭ ಪುನಃ ೫ಶುಭ ಪುನಃ ೩ ಅಶುಭ ಪುನಃ ೩ ಶುಭ ಇದು ಕೃಷಿಪ್ರಾರಂಭಕ್ಕೆ ಶುಭಾಶುಭ ನಕ್ಷತ್ರಗಳು.

ಭುಕ್ತಂತಾರಚತುಷ್ಟಯಂ ಚ ಫಣಿನಾಪೂರ್ವಂತದಾರೂಢಭಂ ಪಶ್ಚಾ-
ದ್ಭೋಗ್ಯಭಸಪ್ತಕಂಚಪರತೋಽಷ್ಟಾರೂಢನಕ್ಷತ್ರತಃ ॥ಯತ್ರಾರಂಕೃತಿ-

ಭಾನುಷೋಡಶವಿತಂತದ್ಬೀಜ ವಾಪೇತ್ಯಜೇತ್ ಇತ್ಯೇವಂಕಥಿತಾಃ
ಕ್ರವಾದಿಹಮಹಾದೋಷಾಃಕ್ರಿಯಾನಾಶನಾಃ ॥ ॥೨೨॥

ಟಿ: ಬೀಜಬಿತ್ತುವ ಫಣಿಚಕ್ರವು ಬೀಜಬಿತ್ತುವಿಕೆಯಲ್ಲಿ-ರಾಹು ಇರುವ ನಕ್ಷತ್ರದ ಹಿಂದಿನ ೪ ನಕ್ಷತ್ರಗಳೂ ರಾಹು ಇರುವ ನಕ್ಷತ್ರವೂ, ರಾಹು ಇರುವ ನಕ್ಷತ್ರದ ಮುಂದಿನ ೭ನಕ್ಷತ್ರಗಳೂ, ರಾಹು ಇರುವ ನಕ್ಷತ್ರದಿಂದ ೨೦ನೇ, ೧೨ನೇ, ೧೬ನೇ ನಕ್ಷತ್ರಗಳೂ ತ್ಯಾಜ್ಯಗಳು. ಹೀಗೆ ಈ ಅಧ್ಯಾಯದಲ್ಲಿ ಕಾರ್ಯನಾಶಕಗಳಾದ ಮಹಾದೋಷಗಳು ವಿವರಿಸಲ್ಪಟ್ಟವು.

॥ ಇತಿ ದೋಷಾಧ್ಯಾಯಃ ॥



## ಗುಣಾಧ್ಯಾಯಃ

ಸ್ವರ್ಕ್ಷಸ್ಸೋಚ್ಚಗತೋಗುರುರ್ವಪುಷಿವಾತತ್ಕೇಂದ್ರಗೋವಾತಥಾ ಶು
ಕ್ರೋವಾಶಶಿಜೋಪಿ ವಾಹಿಮರುಚೇಃ ಕೇಂದ್ರರ್ಕ್ಷಗೋವಾಗುರುಃ॥
ಲಗ್ನಾತ್ಕೇಂದ್ರಭವತ್ರಿಕೋಣನಿಲಯೋ ಷ್ವಾತ್ಮಾಂಶ ಗುರ್ವಂಶಗಶ್ಚಂ
ದ್ರೋವಾಬಲವಾನ್ ಸುಕೃತ್ಯ ತನುಗೋವಾಶೇಷ ದೋಷಾನ್ಹರೇತ್
॥೧॥

ಟಿ: ಸ್ವಕ್ಷೇತ್ರ ಉಚ್ಚರಾಶಿಯಲ್ಲಿರುವ ಗುರು ಶುಕ್ರ.ಬುಧರು ಲಗ್ನದಲ್ಲಿಯಾಗಲೀ ಲಗ್ನಾತ್ ಕೇಂದ್ರಗಳಲ್ಲಿಯಾಗಲೀ ಇದ್ದರೆ ಅದೇ ಪ್ರಕಾರನಾದ ಗುರುವು ಚಂದ್ರನಿರುವರಾಶಿಯಿಂದ ಕೇಂದ್ರದಲ್ಲಾಗಲೀ ಇದ್ದರೆ ಸ್ವನವಾಂಶ ಅಥವಾ ಗುರುನವಾಂಶಗಳಲ್ಲಿರುವ ಪಕ್ಷಬಲಯುಕ್ತನಾದ ಅಥವಾ ಶುಭಕ್ರಿಯಾಯುಕ್ತನಾದ ಚಂದ್ರನುತಾತ್ಕಾಲಿಕಲಗ್ನದಿಂದ ಕೇಂದ್ರ ಏಕಾದಶ ತ್ರಿಕೋಣಗಳಲ್ಲಿದ್ದರೆ ಸಮಸ್ತದೋಷಗಳನ್ನು ನಾಶಮಾಡುವನು.

ಶಿಷ್ಟಬ್ರಾಹ್ಮಣಭಾಷಿತಂ ಶುಭತನುಃ ಸದ್ವರ್ಗತಾಚೋದಯೋದೃಷ್ಟಿಃ.
ಸದ್ವಿಹಗಸ್ಯ ಚಂದ್ರಭಪಯೋ ವೃದ್ಧಿರ್ನಿಮಿತ್ತಂಶುಭಂ ॥ ಪಾಪಾಃ

ಶತ್ರುತೃತೀಯಯೋರಪಿಶುಭಾಃ ಕೇಂದ್ರೇ ತ್ರಿಕೋಣೇ ಗ್ರಹಾಃ ಸರ್ವೇಚಾಯುಗತಾಃ ಶುಭಾಃ ಶುಭವಿಧಾ ವೇತೇಮುಹಾಂಶೋ-ಗುಣಾಃ ॥ ॥೧॥

ಟಿ: ವಿಪ್ರರಾದ ಬ್ರಾಹ್ಮಣರ ವಾಕ್ಯ (ಇದು ಒಳ್ಳೆ ಮುಹೂರ್ತವೆಂದು ಹೇಳುವಿಕೆ) ಶುಭಗ್ರಹಕ್ಷೇತ್ರವು ಶುಭಗ್ರಹರಿಂದ ಯುಕ್ತವಾದ ಲಗ್ನವು. ಲಗ್ನವು ಶುಭಗ್ರಹರ ಷಡ್ವರ್ಗಯುಕ್ತವಾಗಿರುವಿಕೆಯು, ಲಗ್ನಕ್ಕೆ ಶುಭ ಗ್ರಹ ದೃಷ್ಟಿ ಇರುವಿಕೆಯು, ಚಂದ್ರನಕಲಾಭಿವೃದ್ಧಿ. ನಕ್ಷತ್ರ ಪರಮ ಘಟೀವೃದ್ಧಿ, ಸಮುದ್ರದ ನೀರಿನ ಏರುವಿಕೆ (ಭರತ)ಯು ಶುಭಶಕುನವು ಪಾಪಗ್ರಹಗಳು. ತೃತೀಯ ಷಷ್ಠಗಳಲ್ಲಿ ಶುಭಗ್ರಹಗಳು, ಕೇಂದ್ರತ್ರಿಕೋಣ ಗಳಲ್ಲಿ ಸಾಮಾನ್ಯ ಎಲ್ಲಾಗ್ರಹಗಳು ಏಕಾದಶದಲ್ಲಿ ಇರುವಿಕೆಯು ಇವುಗಳೆ-ಲ್ಲಾ ಶುಭಕಾರ್ಯಗಳಲ್ಲಿ ಶುಭವನ್ನುಂಟುಮಾಡುವ ಮಹಾಗುಣಗಳಾಗಿವೆ.

ಶ್ರೀ ನಾಥಾಂತ್ಯಜಲೋತ್ತರಾಶ್ಚ ಜನನೀ ವಸ್ವಂಬು ನಾಥಾನಿಲಾಃ ಮಿತ್ರಾಂತ್ಯಾಂತಕ ಭಾನಿವಿಶ್ವ ಶಶಭೃತ್ ಬ್ರಹ್ಮಾನುರಾಧಾಭಗಾಃ ॥ ಮಿತ್ರಾದಿತ್ಯನಿಲಾಶ್ವಿನೇಯಗುರವೋ ಭಾಗ್ಯತ್ರಯಾತ್ಯಾಶ್ವಿನೀ ಮೂಲಾಧಾತ್ರ ನಿಲತ್ರಯಾಗ್ನಿವರುಣಾಃ ಸಿದ್ಧಾ ಇನಾದ್ದೇದಿನಾತ್ ॥ ॥೨॥

ಟಿ: ಸಿದ್ಧಯೋಗಗಳು- ರವಿವಾರದಲ್ಲಿ ಶ್ರವಣ, ರೇವತಿ, ಪೂರ್ವಾಷಾಢ, ಉತ್ತರಾ, ಉತ್ತರಾಷಾಢ, ಉತ್ತರಾಭದ್ರೆಗಳು. ಸೋಮವಾರದಲ್ಲಿ ಪುನರ್ವಸು, ಧನಿಷ್ಠಾ, ಶತಭಿಷೆ, ಸ್ವಾತಿಗಳೂ, ಕುಜವಾರದಲ್ಲಿ ಅನುರಾಧಾ, ರೇವತಿ, ಭರಣಿಗಳೂ. ಬುಧವಾರದಲ್ಲಿ ಉತ್ತರಾಷಾಢ, ಮೃಗಶಿರಾ, ರೋಹಿಣಿ, ಅನುರಾಧಾ, ಉತ್ತರೆಗಳೂ, ಗುರುವಾರದಲ್ಲಿ ಅನುರಾಧಾ, ಪುನರ್ವಸು, ಸ್ವಾತಿ ಅಶ್ವಿನಿ, ತಿಷ್ಯಗಳೂ, ಶುಕ್ರವಾರದಲ್ಲಿ ಉತ್ತರಾ ಹಸ್ತ, ಚಿತ್ರಾ, ರೇವತಿ. ಅಶ್ವಿನಿ, ಮೂಲಗಳು ಶನಿವಾರದಲ್ಲಿ ರೋಹಿಣಿ, ಸ್ವಾತಿ, ವಿಶಾಖಾ, ಅನುರಾಧೆ, ಕೃತ್ತಿಕೆ , ಶತಭಿಷೆಗಳು, ಹೀಗೆ ಉಕ್ತವಾರ ಗಳಲ್ಲಿ ಉಕ್ತನಕ್ಷತ್ರಗಳ ಯೋಗವಾದರೆ ಅವುಗಳಿಗೆ "ಸಿದ್ಧಯೋಗ"ಗಳೆನ್ನು ವರು. ಅಂದರೆ ಸಿದ್ಧಿಕರಯೋಗಗಳಾಗುವವು.

ಮೂಲಾರ್ಯೋಷ್ಣಕರಾಃ ಶಶಿಶ್ರವಣಭೇಬುಧ್ಯಾಶ್ವಿವಿಶ್ವೋತ್ತರಾ

ರೋಹಿಣ್ಯಾಃಶರಸಪ್ತಮೀ ತಿಥಿಯುತಾ ವಿಶ್ವಾನುರಾಧಾಗ್ನಯಃ॥ ತೋ-
ಯಾಂತ್ಯಾದಿತಯಃ ಸವಿಶ್ವತಿಥಯೋನಂದಾಬ್ಧಿ ಭಾಗ್ಯಾನಿಲಾ ಭದ್ರಾ
ವಸ್ವಜವಾಯವ್ರೋಃ ರವಿದಿನಾದ್ಯೇಗಾಃ ಸುಧಾಖ್ಯಾಃ ಸ್ಮೃತಾಃ ॥
॥೪॥

ಟಿ: ಸುಧಾ ಎಂಬ ಯೋಗವು-ರವಿವಾರದಲ್ಲಿ ಮೂಲಾ, ತಿಷ್ಯ, ಹಸ್ತ, ನಕ್ಷತ್ರಗಳೂ ಸೋಮವಾರದಲ್ಲಿ ಮೃಗಶಿರ, ಶ್ರವಣಗಳೂ, ಕುಜವಾರದಲ್ಲಿ ಉತ್ತರಾಭದ್ರ, ಅಶ್ವಿನಿ, ಉತ್ತರಾಷಾಢ, ಉತ್ತರಾಭದ್ರ, ಉತ್ತರಾ ರೋಹಿಣಿಗಳೂ ಬುಧವಾರದಲ್ಲಿ ಪಂಚಮೀ, ಸಪ್ತಮೀ ಬಂದಾಗ ಉತ್ತರಾಷಾಢ ಅನುರಾಧಾ, ಕೃತ್ತಿಕೆಗಳೂ, ಗುರುವಾರದಲ್ಲಿ ತ್ರಯೋದಶಿ ತಿಥಿ ಬಂದಾಗ ಪೂರ್ವಾಷಾಢ, ರೇವತಿ, ಪುನರ್ವಸು, ನಕ್ಷತ್ರಗಳೂ ಶುಕ್ರವಾರದಲ್ಲಿ ಪಾಡ್ಯ, ಷಷ್ಠಿ, ಏಕಾದಶಿಗಳು ಬಂದಾಗ ಶತಭಿಷೆ, ಉತ್ತರೆ, ಸ್ವಾತಿಗಳೂ ಶನಿವಾರದಲ್ಲಿ ದ್ವಿತೀಯಾ, ಸಪ್ತಮಿ, ಅಥವಾ ದ್ವಾದಶಿ ಬಂದಾಗ ಧನಿಷ್ಠಾ ರೋಹಿಣಿ, ಸ್ವಾತಿಗಳೂ ಇವುಗಳ ಯೋಗದಲ್ಲಿ "ಸುಧಾ" ಎಂಬ ಯೋಗವಾಗುವದು

ಪಂಚತ್ರಿಂಶದುಮೇಶಭೇಪಿತ್ರ್ಯಜನನ್ಯಂತ್ಯಾಗ್ನಿಭೇದ್ವಿಘ್ನಭಂ ಚಿತ್ರಾದ್ಯಾ
ರ್ಯಮ ಮೂಲವಿಶ್ವಗುರುಭೇದ್ವಿಘ್ನಾಕೃತಿಃ ಸರ್ಪಭೇ ॥ ಷಟ್ಪಂಚಾ
ಶದಿನೇ ತ್ರಿನಿಘ್ನತಿತಯಸ್ತತ್ತದ್ವಯಂಬಾಧ್ಯವಾಃ ಕುಲಕ್ಷ್ಮೇತಿಘೃತಿ-
ದ್ವಯಂ ಮೃಗಶಿರಸ್ವಾತೀವಿಶಾಖೇಂದ್ರ ಭೇ ॥ ॥೫॥

ಭಾಗ್ಯಾಬ್ಧ್ಯೋಃ ಪ್ರಕೃತಿದ್ವಯಂ ಕೃತಿಯುಗಂ ಭಾದ್ರೇಶವಿಷ್ಣು-
ಶ್ರವ್ರೋ ವ್ಯತ್ರೀತ್ಯಷ್ಟಯುಗಂ ವಿಧೇರುಡುನಿಷಡ್ವಿಂಶದ್ವಯಂಚೋ-
ದಿತಂ । ಏತೇಭ್ಯಃ ಪರತೋಮೃತಾಖ್ಯಘಟಿಕಾ ನಾಡ್ಯಶ್ಚತಸ್ರಸ್ತ್ವ-
ವಾಯೋಗಾಃ ಸಿದ್ಧಸುಧಾಹ್ವಯಾವಿಷಚಿಕಿತ್ಸಾದೌಶುಭೇ
ಚೋತ್ತಮಾಃ ॥೬॥

ಟಿ :ಆರ್ದ್ರಾನಕ್ಷತ್ರದಲ್ಲಿ ೨೧ ಘಟಿಗಳು ಮಘಾ, ಪುನರ್ವಸು, ರೇವತಿ, ಕೃತ್ತಿಕಾ, ನಕ್ಷತ್ರಗಳಲ್ಲಿ ೫೦ ಘಟಿಗಳು ಚಿತ್ರಾ, ಅಶ್ವಿನಿ, ಮುಬ್ಬಾ, ಮೂಲಾ, ಉತ್ರಾಷಾಢ, ತಿಷ್ಯಗಳಲ್ಲಿ ೪೦ ಘಟಿಗಳು, ಆಶ್ಲೇಷಾ ನಕ್ಷತ್ರದಲ್ಲಿ ೨೨ ಘಟಿಗಳು ಹಸ್ತನಕ್ಷತ್ರದಲ್ಲಿ ೪೫ ಘಟಿಗಳು, ಉತ್ತರಾಭದ್ರಾ, ಪೂರಾ

ಷಾಢಾ, ಭರಣಿಗಳಲ್ಲಿ ೪೮ ಘಟಿಗಳು, ಮೃಗಶಿರ ಸ್ವಾತಿ, ವಿಶಾಖಾ ಜ್ಯೇಷ್ಠಾ ನಕ್ಷತ್ರಗಳಲ್ಲಿ ೩೮ ಘಟಿಗಳು, ಉತ್ತರಾ, ಶತಭಿಷೆಗಳಲ್ಲಿ ೪೨ ಘಟಿಗಳು, ಪೂರ್ವಾಭಾದ್ರೆಯಲ್ಲಿ ೪೦ ಘಟಿಗಳು, ಧನಿಷ್ಠಾ, ಶ್ರವಣ, ಅನುರಾಧೆಗಳಲ್ಲಿ ೩೪ ಘಟಿಗಳು, ರೋಹಿಣಿ ನಕ್ಷತ್ರದಲ್ಲಿ ೫೨ ಘಟಿಗಳು ಈ ಹೇಳಿದ ನಕ್ಷತ್ರಘಟಿಗಳ ಮುಂದೆ ೪ ಘಟಿಗಳು ಅಮೃತಘಟಿಗಳೆನ್ನಲ್ಪಡುವವು. ಈ ಅಮೃತ ಘಟಿಗಳು ಹಿಂದೆ ಹೇಳಿದ ಸಿದ್ಧಸುಧಾ ಎಂಬ ಯೋಗಗಳೂ ವಿಷಚಿಕಿತ್ಸೆ ವಿವಾಹ ಉಪನಯನಾದಿ ಶುಭಕಾರ್ಯಗಳಲ್ಲೂ ಶುಭಫಲಕೊಡುವಂತವುಗಳು.

**ಸ್ವೋಚ್ಚಕರ್ಕ್ಷಾಂಶ ಸುಹೃತ್ತ್ರಿಕೋಣಭವನೇ ಸ್ಥಾನಾಖ್ಯಮಿಂದೋಃಸಿತೇ ಪಕ್ಷೇರ್ಕಸ್ಯಚ ಸೌಮ್ಯವತ್ಮನಿ ಕುಜಾದೀನಾಂ ಚ ವಕ್ರೋಪಿವಾ ॥ ಚೇಷ್ಟಾಖ್ಯಂ ಶುಭದೃಗ್ಯುತಸ್ಯ ಚ ದೃಗಾಖ್ಯಂ ಸ್ಯಾದ್ದಿವೋರ್ಕೋಃ ಶನೇಃ ಜೀವಾನಾಂ ಸಮುಯಾಹ್ವಯಂ ನಿಶಿತದನ್ಯೇಷಾಂ ಚ ಚಾಂದ್ರೇಃ ಸದಾ ॥ ॥೭॥**

**ಟಿ:** ಗ್ರಹಗಳಿಗೆ ಸ್ಥಾನಾದಿಬಲಗಳು-ಗ್ರಹಗಳಿಗೆ ತಂತಮ್ಮ ಉಚ್ಚರಾಶಿ ಹಾಗೂ ಸ್ವರಾಶಿ ತಂತಮ್ಮ ನವಾಂಶ ತಂತಮ್ಮ ಮಿತ್ರಗ್ರಹ ತಮ್ಮ ಮೂಲ ತ್ರಿಕೋಣರಾಶಿ ಇವುಗಳಲ್ಲಿರುವಿಕೆಗೆ ಸ್ಥಾನಬಲವೆನ್ನುವರು ಚಂದ್ರನಿಗೆ ಶುಕ್ಲಪಕ್ಷ ಸೂರ್ಯನಿಗೆ ಉತ್ತರಾಯಣ ಕುಜಾದಿಗ್ರಹಗಳಿಗೆ ವಕ್ರಚಾರ ಯುದ್ಧಜಯ ಚಂದ್ರ ಸಮಾಗಮ ಮೊದಲಾದವುಗಳು ಚೇಷ್ಟಾಬಲಗಳೆನ್ನಲ್ಪಡುವವು. ಗ್ರಹಗಳಿಗೆ ಶುಭದೃಷ್ಟಿಯುಳ್ಳರುವಿಕೆಗೆ ದೃಗ್ಬಲವೆನ್ನುವರು. ರವಿ, ಶುಕ್ರ ಗುರುಗಳಿಗೆ ಹಗಲಿನಲ್ಲಿ ಬುಧನಿಗೆ ಹಗಲುರಾತ್ರಿಗಳಲ್ಲಿ ಉಳಿದ ಗ್ರಹಗಳಿಗೆ ರಾತ್ರಿಯಲ್ಲೂ ಕಾಲಬಲವಿರುವದು.

**ಪ್ರಾಗಾದ್ಯೇಷುಚ ಲಗ್ನಖಾಸ್ತಸುಖಭೇಷ್ವಾರ್ಯೋಇಂದುಜೌಭಾಸ್ಕರ ಕ್ಷೋಣೀಜೌರವಿಜಃ ಸುಧಾಂಶುಭೃಗುಜೌ ದಿಗ್ವೀರ್ಯವಂತಃ ಕ್ರಮಾತ್ ॥ ಮಂದಾರೇಂದುಜ ಜೀವಭಾರ್ಗವ ವಿಧುಬ್ರಧ್ನಾ ನಿಸರ್ಗಾತ್ಪಗಾ ವೀರ್ಯಾಢ್ಯಾಃ ಕ್ರಮವೃದ್ಧಿ ತಸ್ತ್ವಿಹಬಲಾ ನ್ಯೇವಂ ವಿಚಿಂತ್ಯಾ ನಿಷಟ್ ॥ ॥೮॥**

**ಟಿ:** ಪೂರ್ವಾದಿ ದಿಕ್ಕುಗಳಲ್ಲಿ ಕ್ರಮದಿಂದ ಲಗ್ನದಲ್ಲಿ ಗುರು, ಬುಧರೂ ದಶಮದಲ್ಲಿ ರವಿ ಕುಜರೂ, ಸಪ್ತಮದಲ್ಲಿ ಶನಿಯೂ, ಚತುರ್ಥದಲ್ಲಿ ಚಂದ್ರ ಶುಕ್ರರೂ ದಿಗ್ಬಲವುಳ್ಳವರಾಗುವರು. ಶನಿಗೆ ೧/೭ ಕುಜನಿಗೆ ೨/೭ ಬುಧನಿಗೆ ೩/೭ ಗುರುವಿಗೆ ೪/೭ ಶುಕ್ರನಿಗೆ ೫/೭ ಚಂದ್ರನಿಗೆ ೬/೭ ರವಿಗೆ೧ ಹೀಗೆ ಸಪ್ತಮಾಂಶ ವೃದ್ಧಿಯು ಕ್ರಮದಿಂದ "ನೈಸರ್ಗಿಕ ಬಲ"ವಿರುವದು. ಹೀಗೆ ಷಡ್ಬಲಗಳನ್ನು ತಿಳಿದುಕೊಳ್ಳುವದು.

**ರಾಶ್ಯಾದೇಶ್ಚನವಾಂಶ ಕೋತಿಬಲವಾನ್ ಸ್ಯಾತ್ಕಾಲಹೋರಾತತೋ ವೀರ್ಯಾಢ್ಯಾ ಯಾ ತದಷ್ಟ ಏವ ಬಲವಾನ್ ರಾಶಿಃ ಪತೀದ್ಯೇಂದುಜ್ಯೈಃ ॥ ಪಂಚಾಂಗೇಷು ಬಲಾಢ್ಯಮುಪ್ಯುಡು ಬಲೀಖೇಟೇಷು ಚಂದ್ರೋಪ್ಯತಸ್ತಾರಾ ಚಂದ್ರಬಲಂ ಪ್ರಧಾನಮುದಿತಂ ಕರ್ತುರ್ಮುಹೂರ್ತಸ್ಯ ಚ ॥ ॥೯॥**

**ಟಿ:** ರಾಶ್ಯಾದಿಗಳ ಬಲ ತಾರತಮ್ಯ_ರಾಶಿ (ಕ್ಷೇತ್ರ) ಹೋರಾ, ದ್ರೇಕ್ಕಾಣ ನವಾಂಶಕ, ದ್ವಾದಶಾಂಶಕ, ತ್ರಿಶಾಂಶಗಳಲ್ಲಿ ನವಾಂಶವೇ ಬಲಿಷ್ಠವು. ಅದಕ್ಕಿಂತ ಕಾಲಹೋರೆಯು ಬಲಿಷ್ಠವು, ಲಗ್ನಾದಿಗಳು ತಂತಮ್ಮ ರಾಶ್ಯಧಿಪತಿಗಳು, ಹಾಗೂ ಗುರು, ಬುಧರಿಂದ ಯುಕ್ತ ಅಥವಾ ದೃಷ್ಟಗಳಾದವರೇನೆ ಬಲಿಷ್ಠಗಳಾಗುವವು. ಪಂಚಾಂಗ (ತಿಥಿ, ವಾರ, ನಕ್ಷತ್ರ ಯೋಗ, ಕರಣ)ಗಳಲ್ಲಿ ನಕ್ಷತ್ರವೇ ಬಲಿಷ್ಟವಾದದ್ದು. ಗ್ರಹಗಳಲ್ಲಾದರೋ ಚಂದ್ರನೇ ಬಲಿಷ್ಠನು. ಆದ್ದರಿಂದ ಯಜಮಾನನಿಗೂ, ಮುಹೂರ್ತಕ್ಕೂ ತಾರಾಬಲ, ಚಂದ್ರಬಲಗಳೇ ಪ್ರಧಾನವೆನ್ನಲ್ಪಡುವದು.

**ಲಗ್ನೇಶಃ ಶಶಭೃತ್ತದಾಶ್ರಯ ಗೃಹಾಧೀಶೋ ಯದಾಮೀತ್ರಯೋ ವೀರ್ಯಾಢ್ಯಾಃ ಶುಭಖೇಟ ದೃಷ್ಟಿಸಹಿತಾ ಲಗ್ನಂ ಚ ವೀರ್ಯಾನ್ವಿತಂ ॥ ಸ್ವರ್ಕ್ಷಸ್ವೋಚ್ಚ ಸುಹೃತ್ತ್ರಿಕೋಣಗೃಹಗಾಃ ಖೇಟಾಶ್ಚ ಹೋರಾಸತಾಂ ಕಾಲಃಸ್ಯಾತ್ಸತದಾ ಗುಣಾಧಿಕ ಇತಿ ಪ್ರೋಕ್ತಾಃ ಪ್ರಸಿದ್ಧಾಃ ಗುಣಾಃ ॥ ॥೧೦॥**

**ಟಿ:** ಗುಣಾಧಿಕ ಕಾಲವು –ತಾತ್ಕಾಲಿಕ ಲಗ್ನಾಧಿಪತಿಯೂ, ತಾತ್ಕಾಲಿಕ ಚಂದ್ರನೂ, ಆ ಚಂದ್ರನಿರುವ ರಾಶ್ಯಧಿಪತಿಯೂ, ಹೀಗೆ ಈ ಮೂರೂ

ಯಾವ ಕಾಲದಲ್ಲಿ ಸ್ಥಾನ, ಯುತಿ, ದೃಷ್ಟ್ಯಾದಿ ಬಲವುಳ್ಳವರಾಗುತ್ತಾರೋ ಮತ್ತು ತಾತ್ಕಾಲಿಕ ಲಗ್ನವೂ ಬಲಶಾಲಿಯಾಗಿರುತ್ತದೋ ಮತ್ತು ಗ್ರಹರೂ ಸಹ ಉಚ್ಚ, ಸ್ವರಾಶಿ, ಮಿತ್ರ, ತ್ರಿಕೋಣ, ರಾಶಿಗಳನ್ನು ಹೊಂದಿರುತ್ತಾರೋ ಮತ್ತು ಶುಭಗ್ರಹರ ಕಾಲಹೋರೆಯಿರುತ್ತದೋ ಆ ಕಾಲವು ಹೆಚ್ಚಿನ ಗುಣವುಳ್ಳದ್ದೆಂದು ತಿಳಿಯತಕ್ಕದ್ದು.

ಹೀಗೆ ಪ್ರಸಿದ್ಧ ಗುಣಗಳು ಹೇಳಲ್ಪಟ್ಟವು.



## ಅಥ ಸಂಸ್ಕಾರಾಧ್ಯಾಯಃ

**ಗರ್ಭಾದಾನ ಮುಖೇಷು ಕರ್ಮಸು ಮಹಾದೋಷಾಂ ಸೃಜೇತ್ ಸದ್ಗುಣಾನ್ಗೃಹ್ಣೀಯಾಚ್ಛುಭತಾರಕಾದಿಗಣಃಸಾಮಾನ್ಯತಃ ಸ್ಯಾಚ್ಛುಭಃ ॥ ಯಃ ಸ್ಯಾತ್ತತ್ರವಿಶೇಷ ಏವ ಪುರತಃ ಸಪ್ರೋಚ್ಯ ತೇಥ ಸ್ತ್ರಿಯಾಃ ಗರ್ಭಾಧಾನವಿಧಿಃ ಪರೇಹನಿರಜಃ ಸ್ನಾನಾರ್ದ್ವಿಧೇಯಃ ಶುಭಃ॥ ॥೧॥**

**ಟಿ:** ಗರ್ಭಾಧಾನ ಮೊದಲಾದ ಸಂಸ್ಕಾರಗಳಲ್ಲಿ ಸಾಮಾನ್ಯವಾಗಿಪೂರ್ವೋಕ್ತ ಮಹಾದೋಷಗಳನ್ನು ಬಿಡತಕ್ಕದ್ದು. ಒಳ್ಳೇ ಗುಣಗಳನ್ನು ಸ್ವೀಕರಿಸತಕ್ಕದ್ದು ತ್ಯಾಜ್ಯಗಳಲ್ಲದೇ ಹೋದ ನಕ್ಷತ್ರಾದಿಗಳು ಸಾಮಾನ್ಯ ಶುಭಗಳೇ ಸರಿ ಆಯಾಯ ಸಂಸ್ಕಾರಗಳಲ್ಲಿ ಕೆಲ ವಿಶಿಷ್ಟ ನಕ್ಷತ್ರಾದಿಗಳು ಮುಂದೆ ಹೇಳಲ್ಪಡುವವು. ಇನ್ನು ಗರ್ಭಾಧಾನಕ್ಕೆ ಸಾಮಾನ್ಯವಾಗಿ ಋತೂದ್ಗಮದಿಂದ ೫ನೇ ದಿವಸವು ಶುಭವು. ಪೂರ್ವಾದಿ ವಿಶೇಷ ನಿಷಿದ್ಧದಿವಸವಲ್ಲದಿದ್ದರೆ ೫ನೇ ದಿವಸಕ್ಕೆ ಮುಹೂರ್ತ ನೋಡಬೇಕಿಲ್ಲವೆಂದು ಅಭಿಪ್ರಾಯ.

**ಯೋಷಾಯಾಜನನರ್ಕ್ಷತೋಽನುಪಚಯ ಸ್ಥಾನೇಹಿ ಮಾಂಶಾಯುತೇ ದೃಷ್ಟೇವಾ ವನಿಜೇನ ಗರ್ಭಫಲದಂ ಜಾತಂ ರಜೋನಾನ್ಯತಾ ॥**

**ಚಂದ್ರೇಚೋಪಚಯರ್ಕ್ಷಗೇ ಗುರುದೃಶಾ ಯುಕ್ತೇ ನಿಷೇಕಂ ಪುಮಾನ್ ಕುರ್ಯಾತ್ಪುಣ್ಯದಿನಂ ವಿನಾನಿಶಿಮಘಾ ಶೂರ್ರ್ಪೋಜ್ಝಿತೇ ಸದ್ಗಣೇ ॥ ॥೨॥**

**ಟಿ:** ಗರ್ಭಾಧಾನಕ್ಕೆ ವಿಶಿಷ್ಟ ಮುಹೂರ್ತವು-ಸ್ತ್ರೀಯ ಜನ್ಮಕಾಲಿಕ ಚಂದ್ರ ರಾಶಿಯ ದೆಸೆಯಿಂದ ೩-೬-೧೦-೧೧ ಈ ಸ್ಥಾನಗಳಿಗಿಂತ ಹೊರತಾದ ಸ್ಥಾನದಲ್ಲಿ ತಾತ್ಕಾಲಿಕ ಚಂದ್ರನ ಕುಜನಿಂದ ಯುತನಾಗಲೀ ದೃಷ್ಟನಾಗಲೀ ಆ ಸಮಯದಲ್ಲಿ ಉಂಟಾದ ರಜಸ್ಸು ಗರ್ಭವನ್ನುಂಟುಮಾಡುವಂಥದ್ದು ಅಲ್ಲದೇ ಹೋದರೆ ಗರ್ಭಫಲ ಕೊಡಲಾರದು. ಪುರುಷನು ಸ್ತ್ರೀಯ ಜನ್ಮರಾಶಿಯ ದೆಶೆಯಿಂದ ಚಂದ್ರನು ೩-೬-೧೦-೧೧ನೇ ಸ್ಥಾನದಲ್ಲಿರುವಾಗ ಗುರುದೃಷ್ಟಿ ಇರುವಾಗ ಪುಣ್ಯ ದಿನವನ್ನು ಬಿಟ್ಟು ಮಘಾ, ವಿಶಾಖೆ. ಗಳನ್ನು ಬಿಟ್ಟು ಒಳ್ಳೇ ನಕ್ಷತ್ರ ಗಣದಲ್ಲಿ ಉಕ್ತ ರಾತ್ರಿಗಳಲ್ಲಿ ಗರ್ಭಾಧಾನ ಮಾಡತಕ್ಕದ್ದು.

**ಕುರ್ಯಾತ್ಪುಂಸವನಾಖ್ಯಕರ್ಮ ವಿದಿತೇ ಗರ್ಭೇತೃತೀಯೇ ಸ್ತ್ರಿಯಾಃ ಮಾಸೇ ಸದ್ದಿವಸೇ ಹರೀಂದುದಿನಕೃತ್ಪುಷ್ಯೇಷ್ವರಿಕ್ತಾತಿಥೌ ॥ ಕನ್ಯಾಕರ್ಕಿಯಮೋನಿತೇ ಶುಭಗ್ರಹೇ ಪುನ್ನಾಮಭೇವಾವಿಧೌ ವೀರ್ಯಾಢ್ಯೇಚ ಶುಭಗ್ರಹೇ ತನುಗತೇ ಶುದ್ಧೇ ಗೃಹೈರಷ್ಟಮೇ ॥ ॥೩॥**

**ಟಿ:** ಗರ್ಭವತಿಯಾದದ್ದು ತಿಳಿದಮೇಲೆ ೩ನೇ ತಿಂಗಳಲ್ಲಿ ಶುಭವಾರಗಳಲ್ಲಿ ರಿಕ್ತಾರಹಿತಗಳಾದ ತಿಥಿಗಳಲ್ಲಿ ಶ್ರವಣ, ಮೃಗಶಿರ, ಹಸ್ತ, ತಿಷ್ಯ ನಕ್ಷತ್ರ ಗಳಲ್ಲಿ ಕನ್ಯಾ, ಕರ್ಕಟಕ. ಮಿಥುನ, ರಹಿತಗಳಾದ ಶುಭ ಗ್ರಹರ ರಾಶಿ ಯಲ್ಲಿ ಅದರಲ್ಲಾದರೂ ಸಾಧ್ಯವಾದರೆ ಪುರುಷರಾಶಿಯಲ್ಲಿ ಚಂದ್ರನು ಬಲಿಷ್ಠನಾಗಿರುವಾಗ ಶುಭ ಗ್ರಹರು ಲಗ್ನದಲ್ಲಿರುವಾಗ ಲಗ್ನಾದಷ್ಟಮವು ಗ್ರಹರಹಿತವಾಗಿರುವಾಗ "ಪುಂಸವನ"ವೆಂಬ ಸಂಸ್ಕಾರ ಮಾಡತಕ್ಕದ್ದು.

**ಸೀಮಂತೋನ್ನಯನಂ ಸ್ತ್ರಿಯಾವಿತನುಯಾನ್ಮಾಸೇ ಚತುರ್ಥೇಮು- ರುತ್ ಚಿತ್ರಾಮಿತ್ರವಸುದ್ವಯಾಶ್ವಿರಹಿತೇ ಸೌಮ್ಯೇಗಣೇಸದ್ದಿನೇ ॥ ಪುಷ್ಟೈರ್ವಿಷ್ಣುಭಲಿಂವಿಧಾತೃಹರಿಭೇ ಗರ್ಭಸ್ಯಮಾಸೇಷ್ಟಮೇ ಕುರ್ಯಾತ್ತತ್ಕ್ಷಣಮಾತ್ಮಜೋದಯದಿನೇ ತಸ್ಯೈವ ಜಾತಕ್ರಿಯಾಂ ॥ ॥೪॥**

**ಟಿ:** ಸ್ತ್ರೀಗೆ ಗರ್ಭದಿಂದ ೪ನೇ ತಿಂಗಳಲ್ಲಿ ಸ್ವಾತಿ, ಚಿತ್ರಾ, ಅನುರಾಧಾ, ಧನಿಷ್ಠಾ, ಶತಭಿಷ, ಅಶ್ವಿನಿ, ಇವುಗಳಿಂದ ಹೊರತಾದ ಶುಭ ನಕ್ಷತ್ರ ಗಣದಲ್ಲಿ "ಸೀಮಂತ"ಕಾರ್ಯವನ್ನು ಮಾಡತಕ್ಕದ್ದು. ಗರ್ಭದ ಪುಷ್ಟಿ ಗೋಸ್ಕರ ಎಂಟನೇ ತಿಂಗಳಲ್ಲಿ ಒಳ್ಳೆದಿನದಲ್ಲಿ ರೋಹಿಣಿ, ಶ್ರವಣ, ನಕ್ಷತ್ರ ಗಳಲ್ಲಿ ವಿಷ್ಣುಬಲಿಯನ್ನು ಮಾಡತಕ್ಕದ್ದು. ಶಿಶುವು ಜನನವಾದ ಕೂಡಲೇ ಅದೇ ದಿನದಲ್ಲಿ ಅದೇ ಕ್ಷಣದಲ್ಲಿ ಶಿಶುವಿನ ಜಾತಕರ್ಮ ಸಂಸ್ಕಾರವನ್ನು ಮಾಡತಕ್ಕದ್ದು.

**ಜಾತಸ್ಯೈವಶಿಶೋಃ ಪ್ರಸೂತಿದಿವಸಾನ್ನಾಮಾಹನಿದ್ವಾದಶೇಕುಯರ್ಾ ದ್ವಾನ್ಯದಿನೇ ಪಿಸದ್ಗಣಯುತೇ ಹೀನೇಽಷ್ಟಮೇಚಗ್ರಹೈಃ ॥ ಮಿತ್ರೋ ಚ್ಚರ್ಕ್ಷಗತಗ್ರಹೇಣಸಹಿತೇ ದೃಷ್ಟೇಽಪಿವಾಂಶೇ ಕೃತಂ ಪ್ರಖ್ಯಾತಂ ಜಗತೀಹನಾಮವಿಕಲಂ ಸ್ಯಾದನ್ಯಥಾಸ್ಥೇನತತ್ ॥ ॥೫॥**

**ಟಿ:** ಹುಟ್ಟಿದ ಶಿಶುವಿಗೆ ಹುಟ್ಟಿದ ದಿವಸದಿಂದ ೧೨ನೇ ದಿವಸದಲ್ಲಿಯೇ ನಾಮಕರಣ ಮಾಡತಕ್ಕದ್ದು. ಸಂಭವಿಸದಿದ್ದರೆ ಬೇರೆ ಶುಭಗಣ ನಕ್ಷತ್ರ ಗಳಲ್ಲಿ ಅಷ್ಟಮಶುದ್ಧಿಯಿರುವಾಗ ಮಿತ್ರಗ್ರಹ, ಉಚ್ಚಗ್ರಹಗಳನ್ನು ಹೊಂದಿರುವ ಗ್ರಹರಿಂದ ಯುಕ್ತ ಅಥವಾ ದೃಷ್ಟವಾದ ನವಾಂಶದಲ್ಲಿ ಅರ್ಥಾತ್ ಆ ಲಗ್ನದಲ್ಲಿ ಮಾಡಲ್ಪಟ್ಟ "ನಾಮ"ವು ಜಗತ್ತಿನಲ್ಲಿ ಪ್ರಖ್ಯಾತವಾಗುವದು. ಇದಕ್ಕೆ ವಿಪರೀತವಾದಲ್ಲಿ "ನಾಮ"ವು ಪ್ರಸಿದ್ಧವಾಗುವದಿಲ್ಲ.

**ಕಾರ್ಯಂನಿಷ್ಕ್ರಮಣಂ ಗೃಹಾಚ್ಛುಭದಿನೇ ಮಾಸೇಚತುರ್ಥೇತಥಾ ಷಷ್ಠೇಮಾಸಿಝಷೋಜ್ಝಿತೇಶುಭಗಣೇ ಕ್ಷೀರಾಶನಂಪ್ರಾಶಯೇತ್ ॥ ವೇಧ್ಯಂನಾಮದಿನೇಽಪಿವಾಶ್ರುತಿಯುಗಂ ಮಾಸೇಷ್ಟಮೇ ವಾಶಿಶೋಃ ತತ್ರಾರ್ದ್ರಾಮಕರಾನ್ವಿತಃಶುಭಗಣಃ ಶಸ್ತಸ್ತ್ವನಿಂದೂದಯಃ ॥ ॥೬॥**

**ಟಿ:** ಶಿಶು ಜನನವಾದ ೪ನೇತಿಂಗಳಲ್ಲಿ ಶುಭದಿನದಲ್ಲಿ "ಉಪ ನಿಷ್ಕ್ರಮಣ" ವೆಂಬ ಸಂಸ್ಕಾರವನ್ನು ಮಾಡತಕ್ಕದ್ದು. ಹಾಗೆಯೇ ೬ನೇ ತಿಂಗಳಲ್ಲಿ ಮೀನ ಲಗ್ನರಹಿತವಾದ ಶುಭ ನಕ್ಷತ್ರಗಳಲ್ಲಿ "ಕ್ಷೀರಾನ್ನಪ್ರಾಶನ" ಮಾಡತಕ್ಕದ್ದು. ನಾಮಕರಣ ದಿನದಲ್ಲಾಗಲೀ ೮ನೇ ತಿಂಗಳಲ್ಲಿಯಾಗಲೀ "ಕರ್ಣ ವೇಧನ" (ಕಿವಿಚುಚ್ಚುವದು)ವನ್ನು ಮಾಡತಕ್ಕದ್ದು. ಕರ್ಣವೇಧನದಲ್ಲಿ ಆರ್ದ್ರಾನಕ್ಷತ್ರ ಮಕರಲಗ್ನಗಳಿಂದ ಸಹಿತವಾದ ಲಗ್ನದಲ್ಲಿ ಚಂದ್ರರಹಿತವಾದ ಶುಭಗಣವು ಪ್ರಶಸ್ತವಾದದ್ದು.

**ಸ್ವಾಂತ್ಯಸ್ಥೌ ಸಹಜಾಯಗೌ ಜಲಖಗೌ ಧೀಧರ್ಮ ಗೌವಾಶುಭೌ
ಯೋಗಾಃಕುಂಡಲದಾಸ್ತನೋರ್ಯದಿವ್ಯೃತೌಶುದ್ಧೇಶುಭಾವೇಧನೇ॥
ವರ್ಷೇವಾ ವಿಷಮೋ ಶಿಶೋರ್ವ್ಯಗಯುತೇ ಚಾಪ್ಪೋಜ್ಝಿತೇ ಸದ್ಗ ಹೇ
ಚೌಲಂ ಮೈತ್ರಭಪರ್ವನಂದರಹಿತೇ ಕುರ್ಯಾಚ್ಛುಭೇವಾಸರೇ ॥೭॥**

**ಟೀ:-** ಎರಡು ಶುಭಗ್ರಹಗಳು ಲಗ್ನದಿಂದ ದ್ವಿತೀಯ ವ್ಯಯಗಳಲ್ಲಿರು-ತ್ತಿದ್ದರೆ ತೃತೀಯ - ಏಕಾದಶಗಳಲ್ಲಿ ಚತುರ್ಥ - ದಶಮಗಳಲ್ಲಿ ಪಂಚಮ ನವಮಗಳಲ್ಲಿಯಾಗಲೀ ಇರುವದಾದರೆ ಅಷ್ಟಮ ಶುದ್ಧವಾಗಿರುವಾಗ ಯಜ್ಞಕುಂಡಲಪ್ರದಗಳಾದ ಯೋಗಗಳು ಕರ್ಣವೇಧನದಲ್ಲಿ ಶುಭಪ್ರದ-ಗಳು ವಿಷಮ ವರ್ಷದಲ್ಲಿ ಶುಭವಾರದಲ್ಲಿ ಮಕರ ಲಗ್ನಸಹಿತವಾದ ಧನು ರ್ಲಗ್ನರಹಿತವಾದ ಅನುರಾಧಾ ನಕ್ಷತ್ರ ಪರ್ವತಿಥಿ, ನಂದತಿಥಿ, ರಹಿತವಾದ ಶುಭಗಣದಲ್ಲಿ ಶಿಶುವಿಗೆ ಚೌಳವನ್ನು ಮಾಡತಕ್ಕದ್ದು.

**ಕನ್ಯಾಮಾಸಿ ನಿಜೋಚ್ಚಗೇ ವಿಧುಜನೌ ಹಸ್ತೇಜ್ಞವಾರೇ ಶೇಭೇ ವಾರ್ಕ
ದಿನೇ ಚ ವಿಶ್ವಮುನಿ ರಿಕ್ತಾಭಿರ್ವಿಹೀನೇ ತಿಥೌ ॥ ಅತ್ಯಾಜ್ಯೇ ಭಗಣೇ
ಸ್ಥಿರಾಂತ್ಯ ರಹಿತೇ ರಾಶೌಶಿಶೋಃಪಂಚಮೋ ವರ್ಷೇಚಾಕ್ಷರಮಾರಭೇ
ತವಿಖಗೇ ಚಾಯುಷ್ಯ ವಾಪೇನುತೌ ॥ ॥೮॥**

**ಟೀ:-** ಕನ್ಯಾ ಮಾಸದಲ್ಲಿ ಬುಧನು ಉಚ್ಚನಾಗಿರುವಾಗ ಹಸ್ತನಕ್ಷತ್ರದಲ್ಲಿ ಬುಧವಾರ ಶುಭವಾರ ಅಥವಾ ರವಿವಾರದಲ್ಲಿ ತ್ರಯೋದಶೀ ಸಪ್ತಮಿ ರಿಕ್ತಾ ತಿಥಿಗಳಿಂದ ರಹಿತವಾದ ತಿಥಿಯಲ್ಲಿ ಶುಭನಕ್ಷತ್ರಗಳಲ್ಲಿ ಸ್ಥಿರರಾಶಿ ಮೀನರಾಶಿ ರಹಿತವಾದ ಶುಭರಾಶಿಯಲ್ಲಿ ಅಷ್ಟಮವು ಶುದ್ಧವಾಗಿರುವಾಗ ಪಂಚಮವು ಪಾಪಗ್ರಹದಿಂದ ರಹಿತವಾಗಿರುವಾಗ ಶಿಶುವಿನ ಐದನೇ ವರ್ಷ ದಲ್ಲಿ ಅಕ್ಷರಾರಂಭ ಮಾಡತಕ್ಕದ್ದು.

**ಗರ್ಭಾದ್ವಾಷ್ಟಮ ವತ್ಸರೇರ್ಕ ಶಶಿವಿಚ್ಛುಕ್ರಾರ್ಯವಾರೇಶ್ವ್ಯಜ
ಶ್ರೋಣಾರ್ಯಂದುಕರತ್ರಯಾಬ್ಧಿ ವಸುಮಾತ್ರಂತ್ಯೋತ್ತರಾಮೈ-
ತ್ರಭೇ ॥ ವೇದಾಂಗೋನತಿಥೌ ಶುಭಗ್ರಹಗ್ರಹೇಚಾರ್ಕ್ಕರ್ಕಿಭೇಸದ್ಯು
ತೇ ವೀರ್ಯಾಢ್ಯೇಭೃಗುಜೇಗುರಾವಪಿಶಿಶೋಃ ಕುರ್ಯಾದ್ದ್ವಿಜನ್ಮ-
ಕ್ರಿಯಾಂ ॥೯॥**

ಟಿ: ಶಿಶುವಿನ ಗರ್ಭದಿಂದ ಅಥವಾ ಜನ್ಮದಿಂದ ೮ನೇ ವರ್ಷದಲ್ಲಿ ರವಿ, ಚಂದ್ರ, ಬುಧ, ಗುರು, ಶುಕ್ರವಾರಗಳಲ್ಲಿ ಅಶ್ವಿನಿ, ರೋಹಿಣಿ, ಶ್ರವಣ್ ತಿಷ್ಯ, ಮೃಗಶಿರ, ಹಸ್ತ, ಚಿತ್ರಾ, ಸ್ವಾತೀ, ಶತಭಿಷೆ, ಧನಿಷ್ಠಾ, ಪುನರ್ವಸು ರೇವತಿ, ಉತ್ತರಾ, ಉತ್ತರಾಷಾಢ, ಉತ್ತರಾಭದ್ರಾ, ಅನುರಾಧಾ, ನಕ್ಷತ್ರಗಳಲ್ಲಿ ಚತುರ್ಥೀ ಷಷ್ಠಿರಹಿತವಾದ ತಿಥಿಯಲ್ಲಿ ಶುಭಗ್ರಹರಾಶಿಯು ಲಗ್ನವು ಶುಭಗ್ರಹಯುಕ್ತಗಳಾದ ಸಿಂಹ,ಮಕರ, ಕುಂಭಗಳಲ್ಲಿಯಾದರೂ ಶುಕ್ರನಾಗಲೀ ಗುರುವಾಗಲೀ ಬಲಿಷ್ಠನಾಗಿರುವಾಗ ಶಿಶುವಿಗೆ ಉಪನಯನವನ್ನು ಮಾಡತಕ್ಕದ್ದು.

**ಇಂದೋರ್ದ್ವಿತ್ರಗತೈ ಸ್ತಥಾವ್ಯಯಗತೈರ್ದ್ವಿತ್ರಾಂತ್ಯಗೈಃ ಪಂಚಭಿರ್ಭೌ-**
**ಮಾದ್ಯೈಃಸುನಫಾನಫಾಧುರಧುರಾ ಸಂಜ್ಞಾಃ ಸುಯೋಗಾ ಗ್ರಹೈಃ**
**ತಸ್ಮಾತ್ಸ್ತ್ರಕ್ಷತವಿತ್ತಮೃತ್ಯುಗೃಹಗೈಜ್ಞೇಽಧಿಯೋಗಃಶುಭೈಃ -**
**ಕೇಂದ್ರೇಮಂತ್ರಿಣಿಕೇಸರೀಹಶುಭದಾ ಯೋಗಾ ವಿಶೇಷಾ ಇಮೇ ॥**
**॥೧೦॥**

ಟಿ: ಚಂದ್ರನಿರುವ ರಾಶಿಯಿಂದ ದ್ವಿತೀಯದಲ್ಲಿ ಕುಜಾದಿ ಪಂಚಗ್ರಹರಲ್ಲಿ ಯಾವುದಾದರೊಂದು ಗ್ರಹವಿದ್ದರೆ ಸುನಫಾ ಎಂಬ ಯೋಗವು ಅದೇ ಗ್ರಹರು ವ್ಯಯದಲ್ಲಿದ್ದರೆ "ಅನಫಾ" ಎಂಬ ಯೋಗವೂ ಉಂಟಾಗುತ್ತದ. ಎರಡೂ ಕಡೆಗೆ ಗ್ರಹವಿದ್ದರೆ "ಧುರಾಧುರಾ" ಎಂಬ ಯೋಗವೂ ಉಂಟಾಗುವದು. ಚಂದ್ರನಿಂದ ಸಪ್ತಮ, ಷಷ್ಠ, ದ್ವಿತೀಯ ಅಷ್ಟಮಗಳಲ್ಲಿ ಬುಧ ಗುರು, ಶುಕ್ರರು ಇದ್ದರೆ "ಅಧಿಯೋಗ"ವೆಂಬ ಯೋಗವಾಗುವದು. ಚಂದ್ರನಿಂದ ಕೇಂದ್ರದಲ್ಲಿ ಗುರುವಿದ್ದರೆ "ಕೇಸರಿ" ಎಂಬ ಯೋಗವಾಗುವದು. ಉಪನಯನದಲ್ಲಿ ಈ ಯೋಗಗಳು ವಿಶೇಷ ಶುಭಪ್ರದಗಳಾಗುವವು.

**ವೇದೋಪಕ್ರಣೇಽಹಿಧಾತೃವಸವೋಬ್ರಹ್ಮಾರ್ಣವೌಜ್ಯೋತಿಷೇ। ಶಾಸ್ತ್ರೇ**
**ವ್ಯಾಕರಣೇಽಜಮೈತ್ರಹರಯೋ ವೈದ್ಯೇಽರ್ಕಮಿತ್ರಾಶ್ವಿನಃ ॥ ಗಾಂಧ**
**ರ್ವೇಽದಿತಿವಾರುಣಾಜಗಣಿತೇ ವಸ್ವಂತ್ಯಮಿತ್ರೇಶ್ವರಾಃ ॥ ಯೋಗೇ-**

ಚಾಬ್ಧಿರಹಿಶ್ತ್ರಿಕಾವ್ಯನಿವಹೇ ಚೌರ್ಯೇಽಪ್ರಶಸ್ತೋಹರಿಃ ॥ ॥೧೧॥

ಟಿ ವೇದಾರಂಭದಲ್ಲಿ ಅಶ್ಲೇಷಾ, ರೋಹಿಣಿ, ಧನಿಷ್ಟೆಗಳು ಜೋತಿಃಶಾಸ್ತ್ರದಲ್ಲಿ ರೋಹಿಣಿ, ಶತಭಿಷೆಗಳೂ ವ್ಯಾಕರಣದಲ್ಲಿ ರೋಹಿಣಿ, ಅನುರಾಧಾ, ಶ್ರವಣಗಳೂ ವೈದ್ಯಶಾಸ್ತ್ರದಲ್ಲಿ ಹಸ್ತ, ಅನುರಾಧಾ, ಅಶ್ವಿನಿಗಳೂ ಗಂಧರ್ವಶಾಸ್ತ್ರದಲ್ಲಿ ಪುನರ್ವಸು, ಸ್ವಾತಿಗಳೂ ಗಣಿತದಲ್ಲಿ ಧನಿಷ್ಟಾ, ರೇವತಿ, ಅನುರಾಧಾ, ಆರ್ದ್ರೆಗಳೂ ಯೋಗಶಾಸ್ತ್ರದಲ್ಲಿ ಶತಭಿಷೆಯೂ, ಕಾವ್ಯಶಾಸ್ತ್ರದಲ್ಲಿ ಆಶ್ಲೇಷಾನಕ್ಷತ್ರವೂ, ಚೋರಶಾಸ್ತ್ರದಲ್ಲಿ ಶ್ರವಣವೂ, ಪ್ರಶಸ್ತವಾದದ್ದು.

ವಿದ್ಯಾಯಾಂಗಜವಾಜಿನೋರ್ಮೃಗಶಿರೋಽಶ್ವಿನ್ಯಾತದಾರೋಹಣೇ
ರೋಹಿಣ್ಯುತ್ತರಭಾನ್ಯಜೇ ಶವಸವೋಽಭ್ಯಾಸೇಧನುಃಶಸ್ತ್ರಯೋಃ ॥
ಶಿಷ್ಟೇವಸ್ವಜಮಾತ್ರಮಿತ್ರಶಶಿನಃ ಶಾಸ್ತ್ರೇಪ್ರಶಸ್ತಾಃಸ್ಮೃತಾಃ ವಿದ್ಯಾ-
ಸ್ವಪ್ಯಖಿಲಾಸ್ವಿನಾಶ್ವಿಗುರವಃ ಸದ್ವಾರತಿಥ್ಯನ್ವಿತಾಃ ॥ ॥೧೨॥

ಟಿಃ ಆನೆ ಮತ್ತು ಕುದುರೆಗಳ ಶಾಸ್ತ್ರವಿದ್ಯೆಯಲ್ಲಿ ಮೃಗಶಿರ, ಅಶ್ವಿನಿಗಳೂ ಅವುಗಳ ಏರುವಿಕೆಯಲ್ಲಿ ರೋಹಿಣಿ, ಉತ್ತರಾ ಉತ್ತರಾಷಾಢ ಉತ್ತರಾಭದ್ರೆಗಳೂ, ಧನುಶಸ್ತ್ರಗಳ ಅಭ್ಯಾಸದಲ್ಲಿ ರೋಹಿಣಿ, ಆರ್ದ್ರಾ, ಧನಿಷ್ಟೆಗಳೂ ಉಳಿದ ನ್ಯಾಯ ಮೊದಲಾದ ಶಾಸ್ತ್ರಗಳಲ್ಲಿ ಧನಿಷ್ಟಾ, ರೋಹಿಣಿ, ಪುನರ್ವಸು, ಅನುರಾಧಾ, ಮೃಗಶಿರೆಗಳೂ ಸಮಸ್ತ ವಿದ್ಯೆಗಳಲ್ಲಿ ಸಾಮಾನ್ಯವಾಗಿ ಹಸ್ತ, ಅಶ್ವಿನಿ, ತಿಷ್ಯಗಳೂ ಹೀಗೆ ಹೇಳಿದ ನಕ್ಷತ್ರಗಳು ಶುಭವಾರ ತಿಥಿಗಳಿಂದ ಕೂಡಿದ್ದಲ್ಲಿ ಪ್ರಶಸ್ತಗಳಾಗುವವು.

ಗೃಹ್ಯೋಕ್ತಃ ಸಮಯೋವ್ರತಾದಿಷುಶುಭಃ ಸ್ಯಾದ್ವರ್ಣಿನೋಥೋ
ತ್ತರಾಃ ಪುಷ್ಯಾಂಶ್ಯಾಜಹರೀಂದುಮಾತೃದಿನಕೃಚ್ಚಿತ್ರಾಃಸಮಾವರ್ತನೇ॥
ಶಸ್ತಾಃಸತ್ತಥಯೋ ಹಯಾಂಗಮೃಗರಾಜೋನಾಃ ಗೃಹಾವಾಸರಾಃ
ಸೌನ್ಯಾಶ್ಚಾತ್ರ ನಿಷೇಚನಾದಿಸಮಯೋಪ್ಯೇವಂಕ್ರಮಾದ್ದರ್ಶಿತಃ ॥
॥೧೩॥

ಟೀಃ- ಬ್ರಹ್ಮಚಾರಿಯು ಹೋತ್ರಶುಕ್ರಿಯಾ ಮೊದಲಾದ ವ್ರತಗಳು ತಮ್ಮ ತಮ್ಮ ಗೃಹ್ಯಸೂತ್ರಗಳಲ್ಲುಕ್ತವಾದ ಮುಹೂರ್ತವು ಶ್ರೇಷ್ಠವು. ಸಮಾ-

ವರ್ತನೆಯಲ್ಲಿ ಉತ್ತರಾ, ಉತ್ತರಾಷಾಢಾ ಉತ್ತರಾಭದ್ರೆಗಳು, ತಿಷ್ಯ, ರೇವತಿ, ರೋಹಿಣಿ, ಶ್ರವಣ, ಮೃಗಶಿರ, ಪುನರ್ವಸು ಹಸ್ತ ಚಿತ್ರಾ ನಕ್ಷತ್ರಗಳು, ಮತ್ತು ಧನು ಸಿಂಹಗಳನ್ನು ಬಿಟ್ಟು ಉಳಿದ ಉಪನಯನೋಕ್ತ ರಾಶಿಗಳು ಶುಭವಾರಗಳು ಪ್ರಶಸ್ತಗಳಾಗುವವು. ಹೀಗೆ ಈ ಅಧ್ಯಾಯದಲ್ಲಿ ಗರ್ಭಾದಾನಾದಿ ಮುಹೂರ್ತಗಳು ಕ್ರಮವಾಗಿ ಹೇಳಲ್ಪಟ್ಟವು.



## ॥ ಅಥ ವಿವಾಹಾಧ್ಯಾಯಃ ॥

ತ್ಯರಾಯೋನಿಗ್ರಹೇಶ ರಾಶಿ ದಿನಮಾಹೇಂದ್ರಾಹ್ವಯಾನುತ್ತಮಾನ್
ವಶ್ಯಸ್ತ್ರೀರ್ಘಗಣಾಂಶ್ಚರಜ್ಜುಗ್ರಹವೇದರ್ಕ್ಷಾತ್ಯಯಾಭ್ಯಾಂಯುತಾನ್
ಯೋಗಾನ್‌ಸ್ತ್ರೀವರಯೋರ್ವಿಚಾರ್ಯಜ ವಿಭಾನ್ನಾಮರ್ಕ್ಷತೋವಾ-
ಸುಧೀಃ ತತ್ಪ್ರಶ್ನರ್ಕ್ಷಬಲಾಚ್ಛುಭಾಶುಭಮಪಿಜ್ಞಾತ್ವಾ ವಿವಾಹಂ
ವದೇತ್ ॥ ॥೧॥

**ಟಿ:** ದೈವಜ್ಞನು ವಧೂವರರ ಜನ್ಮನಕ್ಷತ್ರ ಅಥವಾ ನಾಮನಕ್ಷತ್ರದ ಮೇಲಿಂದ ಯೋನಿ ಗ್ರಹೇಶ ರಾಶಿ ದಿನ ಮಾಹೇಂದ್ರ ರಜ್ಜು ಗ್ರಹವೇಧ ನಕ್ಷತ್ರಗಳಲ್ಲದಿರುವಿಕೆ ವಶ್ಯ ಸ್ತ್ರೀದೀರ್ಘ ಗಣ ಹೀಗೆ ದಶಕೂಟಗಳನ್ನು ವಿಚಾರಿಸಿ ತಾತ್ಕಾಲಿಕ ಪ್ರಶ್ನ ಲಗ್ನಕುಂಡಲಿಯ ಗ್ರಹಬಲದಿಂದಲೂ ಶುಭಾಶುಭಗಳನ್ನು ತಿಳಿದು ವಿವಾಹವಿಷಯವನ್ನು ಹೇಳತಕ್ಕದ್ದು.

ಮೂರ್ತೌತ್ರಿಮೂರ್ತಿಸುಖಂ ಪ್ರಜಾಸುತಗೃಹೇ ಪತ್ಯುಃಸುಖಂ ಸಪ್ತಮೇ
ಸೌಭಾಗ್ಯಂ ಸಕಲಂ ಸ್ತ್ರಿಯಾನಿಧನಭೇಚಿಂತ್ಯಂಗ್ರಹಾಣಾಂ ಬಲಾತ್॥
ಸ್ವಸ್ವ ಸ್ವಾಮಿಯುತೇಷು ವಾ ಶುಭಯುತೇ ಷ್ವೇತೇಷು ತತ್ಸ್ಯಾಚ್ಛು
ಭಂ ನೇಷ್ಟಂಪಾಪಯುತೇ ಕ್ಷಿತೇಷು ಚಫಲಂ ಮಿಶ್ರೇಷು ಮಿಶ್ರಂ-
ಭವೇತ್ ॥ ॥೨॥

**ಟಿ:** ಪ್ರಶ್ನಲಗ್ನದಲ್ಲಿ ಶರೀರಸುಖವನ್ನು, ಪಂಚಮದಲ್ಲಿ ಸಂತತಿಸುಖವನ್ನು, ಸಪ್ತಮದಲ್ಲಿ ಪತಿಸುಖವನ್ನೂ, ಅಷ್ಟಮಸ್ಥಾನದಲ್ಲಿ ಸ್ತ್ರೀಯ ಸಕಲಸೌಭಾಗ್ಯವನ್ನೂ, ಗ್ರಹಬಲವನ್ನುನೋಡಿ ಆಲೋಚಿಸತಕ್ಕದ್ದು. ಈ ಹೇಳಿದ ಲಗ್ನಾದಿಸ್ಥಾನಗಳು ತಂತಮ್ಮ ಅಧಿಪತಿಗಳಿಂದ ಅಥವಾ ಶುಭಗ್ರಹಗಳಿಂದ ಯುಕ್ತಗಳಾದರೆ ದೇಹಾದಿಸುಖವಾಗುವದು. ಪಾಪಗ್ರಹ ಸಂಬಂಧವಾದಲ್ಲಿ ಅಶುಭವಾಗುವದು. ಮಿಶ್ರವಾದಲ್ಲಿ ಫಲವೂ ಮಿಶ್ರವಾಗುವದು.

**ಲಗ್ನಾಸ್ತಾಷ್ಟಮ ಷಷ್ಠಗೇಹಿ ಮುಕರೇ ಪಾಪೈಯುತೇ ವೇಕ್ಷಿತೇ**
**ದಂಪತ್ಯೋರ್ನಿಧನಂ ವದೇತ್ತುಹಿನಗೌ ಲಗ್ನೇಚ ಧೌಮೇಸ್ತಗೇ ॥**
**ರಾಹೌವಾರ ವಿಜೇನ್ಯಥಾ ಶುಭಫಲಂಬ್ರೂಯಾನ್ನಿಮಿತ್ತೈಃ ಶುಭೈಃ**
**ಸದ್ವಾರ್ತಾ ಗಮನೇ ಕ್ಷಣೈರಪಿಶುಭಂ ಸೂತ್ಯೈಶಿಶೋರ್ದರ್ಶನಂ ॥**
**॥೩॥**

**ಟಿ:** ಲಗ್ನದಿಂದ ಸಪ್ತಮ, ಅಷ್ಟಮ, ಷಷ್ಠಗಳಲ್ಲಿರುವ ಚಂದ್ರನು ಪಾಪಗ್ರಹಗಳಿಂದ ಯುಕ್ತ ಅಥವಾ ದೃಷ್ಟನಾಗಿದ್ದಗೆ ಚಂದ್ರನು ಪ್ರಶ್ನಲಗ್ನದಲ್ಲಿದ್ದು ಕುಜ, ರಾಹು, ಅಥವಾ ಶನಿಯಾಗಲೀ ಸಪ್ತಮದಲ್ಲಿದ್ದರೆ ಆ ಕಾಲದಲ್ಲಿ ದಂಪತಿಗಳಿಗೆ ಮರಣವನ್ನು ಹೇಳತಕ್ಕದ್ದು. ಇಲ್ಲವಾದರೆ ಶುಭಫಲವಾಗುವದು. ಹೀಗೆ ಸತ್ಪುರುಷರ ವಾರ್ತೆಯು. ಆಗಮನ, ದರ್ಶನ ಇತ್ಯಾದಿ ಶುಭನಿಮಿತ್ತಗಳಿಂದಲೂ ಶುಭವನ್ನು ಹೇಳತಕ್ಕದ್ದು. ಶಿಶುದರ್ಶನವು ಪ್ರಸೂತಿ ಪ್ರಶ್ನೆಯಲ್ಲಿ ಶುಭಕರವು.

**ಕೃಷ್ಣೇ ಪಾಪನಿರೀಕ್ಷಿತೋಯಂಗ್ಮರ್ಕ್ಷಗೋವಾಶಶೀ ಲಗ್ನಾದಷ್ಟಮ**
**ಗೋರಿನೀಚಗೃಹಗಃ ಪಾಪೋಪಿ ಪಾಪೇಕ್ಷಿತಃ ॥ ಷಷ್ಠೆವಾಪಿ ವಿಲಂಭ**
**ಕೃತ್ಪರಿಣಯೇ ವಾಜ್ಯೋನಥಾ ಯೋಗಕೃತ್ ಸದ್ದೃಷ್ಟಿಸುತಾಸ್ತ-**
**ಕರ್ಮ ನವಮುಸ್ಥಾನೇಷು ವಾ ಚಂದ್ರಮಾ ॥** **॥೪॥**

**ಟಿ:** ಕೃಷ್ಣಪಕ್ಷದಲ್ಲಿ ಪಾಪಗ್ರಹರಿಂದ ನೋಡಲ್ಪಟ್ಟ ಪ್ರಶ್ನಲಗ್ನದಿಂದ ಅಷ್ಟಮದಲ್ಲಿರುವ ಅಥವಾ ಸಮರಾಶಿಯಲ್ಲಿರುವ ಚಂದ್ರನೂ ಶತ್ರು ನೀಚ ರಾಶಿಯಲ್ಲಿರುವ ಪಾಪಗ್ರಹರಿಂದ ನೋಡಲ್ಪಟ್ಟ ಲಗ್ನದಿಂದ ಅಷ್ಟಮದಲ್ಲಿರುವ ಅಥವಾ ಷಷ್ಠದಲ್ಲಿರುವ ಪಾಪಗ್ರಹನೂ, ವಿವಾಹ ವಿಷಯದಲ್ಲಿ

ವಿಲಂಬ ಮಾಡತಕ್ಕವನು. ಇವಕ್ಕೆ ವಿಪರೀತವಾಗಿರುವ ಚಂದ್ರನಾಗಲೀ ಅಥವಾ ಪಾಪಗ್ರಹವಾಗಲೀ ಯೋಗಕಾರಿಯಾಗುವನು, ತೃತೀಯ, ಪಂಚಮ, ಸಪ್ತಮ, ನವಮ, ಸ್ಥಾನಗಳಲ್ಲಿ ಶುಕ್ರಗ್ರಹರಿಂದ ನೋಡಲ್ಪಟ್ಟ ಚಂದ್ರನಾದರೂ ಯೋಗಕಾರಿಯಾಗುತ್ತಾನೆ.

ಸ್ಯುಃ ಪಂಚಸ್ವರಯೋಗತೋಽವಕಹಡೈರಗ್ನ್ಯಾದಿತಾರಾ ಮಟಾಭ್ಯಾಂ ಯುಕ್ತೈಃ ಪರತೈರ್ನಯುಗ್ಯಬಜಶೈಃ ಪೈತ್ರಾದಿಮೈತ್ರಾದಿಕಾಃ ॥ ವಸ್ವಾ-ದ್ಯಾಗಸವರ್ಣಯುಕ್ತದಚಲೈರೇಕಂ ಚತುರ್ಭಿಃ ಕ್ರಮಾತ್ ಏಕೇ-ನೈನ ಚತುರ್ಥತ್ಥಮಿತ್ಥಮುದಿತಂ ನಾಮರ್ಕ್ಷಮಾದ್ಯಾಕ್ಷರಾತ್ ॥
॥೨೩॥

ಟಿಃ ಅವಕಹಡಚಕ್ರ– ಸ್ವರಯೋಗದಿಂದ "ಅ ವ ಕ ಹ ಡ" ಹೀಗೆ ೫ ಅಕ್ಷರಗಳ ಕ್ರಮದಿಂದ ಕೃತ್ತಿಕಾದಿ ಏಳು ನಕ್ಷತ್ರಗಳನ್ನು ಲಕ್ಷಿಸತಕ್ಕದ್ದು. ಒಂದೊಂದು ವರ್ಣದಂತೆ ತಿಳಿಯುವದು. ಅ, ಇ, ಉ, ಏ, ಕೃತ್ತಿಕಾ ಪುನಃ ಓ, ವ, ವಿ,ವು, ರೋಹಿಣಿ, ಪುನಃ ವೇ, ವೊ, ಕಾಕಿ, ಮೃಗಶಿರಾ, ಹೀಗೆ ತಿಳಯುತ್ತಾ ಹೋಗಬೇಕು. ಮುಂದೆ "ಮಟಪರತ" ಈ ಐದು ವರ್ಣಗಳಿಂದ ಮಘಾದಿ ಏಳು ನಕ್ಷತ್ರಗಳನ್ನೂ ಹಾಗೆ ನಯಬಜಶ ಈ ಐದು ವರ್ಣಗಳಿಂದ ಅನುರಾಧಾದಿ ಏಳು ನಕ್ಷತ್ರಗಳನ್ನೂ ತಿಳಿಯತಕ್ಕದ್ದು. "ಗಸದಚಲ" ಈ ಐದು ವರ್ಣಗಳಿಂದ ಧನಿಷ್ಠಾದಿ ಏಳು ನಕ್ಷತ್ರಗಳನ್ನೂ ತಿಳಿಯತಕ್ಕದ್ದು. ಆದರೆ ಪ್ರತಿಯೊಂದು ವರ್ಗಗಳಲ್ಲಿ ನಾಲ್ಕನೇ ವರ್ಗದಲ್ಲಿ ಒಂದನೇ ವರ್ಣವನ್ನು ಹೇಳತಕ್ಕದ್ದು. ಹೇಗೆಂದರೆ "ಕು" ಆರ್ದ್ರಾ "ಪು" ಹಸ್ತ ಇತ್ಯಾದಿ ನಾಮಾಕ್ಷರಗಳ ಆದಿವರ್ಣವು ಯಾವ ನಕ್ಷತ್ರ ಹಾಗೂ ಪಾದವು ಬರುತ್ತದೆಂಬುದನ್ನು ಊಹಿಸತಕ್ಕದ್ದು. (ಅಭಿಜಿತ್ಸಹಿತ ೨೮ ನಕ್ಷತ್ರಗಳಾಗುವವು.) "ಲಕ್ಷ್ಮಣ" ಈ ಹೆಸರಿನ ಲ, ಕಾರಕ್ಕೆ ಚೂ ಚೇ-ಚೋಲ ಅಶ್ವಿನಿ, ಈ ಕ್ರಮದಂತೆ ಅಶ್ವಿನೀ, ನಕ್ಷತ್ರದ ೪ನೇ ಪಾದವಾಗುತ್ತದೆ. ಇತ್ಯಾದಿ (ವಿಶೇಷವನ್ನು ಜಾತಕ ಸ್ವಯಂ ಶಿಕ್ಷಕದಲ್ಲಿ ನೋಡಿರಿ.)

ಮತ್ತೋ ಭಾದ್ರಪಸೂ ಹಯೋಕ್ತಿಸರುಣಾ ಗೌಸ್ತ್ರೀತ್ತರರ್ಕ್ಷಂ ಫಣೀ ಕೇಂದ್ರಶ್ವ ಶಿವಮೂಲಭೇಽವಿರನಲಾರ್ಯೋಽದಿತ್ಯಹಿಜಾ-

ಖುಭುಕ್ ॥ ಸ್ವಾತ್ಯಕೌ ಮಹಿಷೋ ನೃಪೇಂದ್ರವಿಂತಭೇ ವ್ಯಾಘ್ರೋಂಬುವಿಷ್ಣ್ವೋ ಕಪಿವೈರ್ಕ್ರೇಂದ್ರಾ ವೃಗ ಉಂದುರು ಪಿತೃ ಯುಗಂ ಯೋನಿರ್ಗಜೋಂತ್ಯಾಂತಕೌ ॥ ॥೬॥

ಟಿ: ಪೂರ್ವಾಭದ್ರೆ, ದನಿಷ್ಠೆಗಳು ಮನುಷ್ಯಯೋನಿ, ಅಶ್ವಿನೀ, ಶತಭಿಷೆಗಳು ಕುದುರೆ, ಉತ್ತರಾ ಉತ್ತರಾಷಾಢ, ಉತ್ತರಾಭದ್ರೆಗಳು ಗೋವು, ರೋಹಿಣಿ, ಮೃಗಶಿರೆಗಳು ಸರ್ಪ, ಆರ್ದ್ರಾ ಆಶ್ಲೇಷೆಗಳು ನಾಯಿ, ಕೃತ್ತಿಕಾ ತಿಷ್ಯನಕ್ಷತ್ರಗಳು ಕುರಿ, ಪುನರ್ವಸು, ಆಶ್ಲೇಷೆಗಳು ಬೆಕ್ಕು, ಸ್ವಾತಿ, ಹಸ್ತಗಳು ಮಹಿಷ, ಚಿತ್ರಾ, ವಿಶಾಖೆಗಳು ಹುಲಿ ಪೂರ್ವಾಷಾಢ, ಶ್ರವಣಗಳು ಕಪಿ ಅನುರಾಧಾ, ಜ್ಯೇಷ್ಠೆಗಳು ಮೃಗ, ಮಘಾ, ಹುಬ್ಬೆಗಳು ಮೂಷಕ, ರೇವತಿ, ಭರಣಿಗಳು ಆನೆ, ಹೀಗೆ ನಕ್ಷತ್ರ ಯೋನಿಗಳು.

ಮೈತ್ರ್ಯೈಕ್ಯಂ ಚ ಶುಭಂ ರಿಪುತ್ವಮಶುಭಂ ಯೋನ್ಯೋಃ ಶುನಃ ಶತ್ರವೋ ಗೋಜೈಣಪ್ಲವಗಾಃ ಮನುಷ್ಯಮಹಿಷಶ್ವಾಜೈಣಗೋವಾನರಾಃ ॥ ವ್ಯಾಘ್ರಸ್ಯಾಸುಹೃದಃ ಪರಸ್ಪರಮರೀ ಸ್ವಾತ್ಯಂ ಮೃಗೇಭೌ ಬಿಡಾಲಾಖೂ ಸೈರಿಭವಾಜಿನೌ ಗಜಹಯೌ ಚ ಖೂರಗಾವೋತ್ಸಹೀ॥ ॥೭॥

ಟಿ: ವಧೂವರರ ಮೇಲನದಲ್ಲಿ ಯೋನಿಗಳ ಮಿತ್ರತ್ವವಿದ್ದರೆ ಶುಭವು, ಶತ್ರುತ್ವವಿದ್ದರೆ ಅಶುಭವು. ನಾಯಿಗೆ, ಗೋ, ಕುರಿ, ಮೃಗ, ಕಪಿಗಳು ಶತ್ರುಗಳು. ಹುಲಿಗೆ ಮನುಷ್ಯ, ಮಹಿಷ, ನಾಯಿ ಕುರಿ ಮೃಗ, ಕಪಿಗಳು ಶತ್ರುಗಳು. ಮೃಗ, ಆನೆಗಳು ಬೆಕ್ಕು, ಇಲಿ, ಮಹಿಷ, ಕುದುರೆ, ಆನೆ, ಕುದುರೆ, ಇಲಿ, ಸರ್ಪಗಳೂ ಸಹ ಪರಸ್ಪರವಾಗಿ ಶತ್ರುಗಳು.

ಪುಂಸಿ ಸ್ತ್ರೀಜನಿಭಾದಪಂಚಮವಿಪದ್ವಾಧರ್ಕ್ಷಜೇಸ್ಯಾದ್ದಿನಂ ವಿಶ್ವಾಶಾಸ್ತ್ಯಭಿಕೃತ್ಯಗಾಕೃತಿ ಚತುರ್ಥೈಕೋನವಿಂಶರ್ಕ್ಷಜೇ॥ ಮಾಹೇಂದ್ರೋ ಜನಿತಾರರಾಶ್ಯಧಿಪಯೋರನ್ಯೋನ್ಯಮೈತ್ರ್ಯಂ ತಯೋರೈಕ್ಯೇವಾ ಮಿಥುನಸ್ಯ ಚಾತಿಬಲವಾನ್ಯೋಗೋ ಗೃಹೇ ಶಾಷ್ಠ್ಯಯಃ ॥ ॥೮॥

ಟಿ: ವರನು ಸ್ತ್ರೀ ಜನ್ಮ ನಕ್ಷತ್ರದಿಂದ ಪ್ರತ್ಯರ ವಧ ವಿಪತ್ ನಕ್ಷತ್ರಗಳ

ಹೊರತಾದ ನಕ್ಷತ್ರಗಳಲ್ಲಿ ಜನಿಸಿದ್ದರೆ "ದಿನಕೂಟ"ವಾಗುವದು. ಸ್ತ್ರೀ ನಕ್ಷತ್ರದಿಂದ ೧೩-೧೦-೧೬-೨೫-೭-೨೨-೨೪-೪-೧೯ ಈ ನಕ್ಷತ್ರಗಳಲ್ಲಿ ಜನಿಸಿದ್ದರೆ "ಮಾಹೇಂದ್ರಕೂಟ"ವಾಗುವದು. ವಧೂವರರ ನಕ್ಷತ್ರಗಳ ಯಾವರಾಶಿಗಳಿರುವವೋ ಅವುಗಳ ಅಧಿಪತಿಗಳ ಮಿತ್ರತ್ವವಿರಲಿ ಅಥವಾ ಒಂದೇ ರಾಶಿ ಅಥವಾ ಒಂದೇ ಅಧಿಪತಿಯಾಗಿರಲಿ "ಗ್ರಹೇಶ"ವೆಂಬ ಬಲಿಷ್ಟವಾದ ಕೂಟವಾಗುವದು.

**ದೃಶ್ಯಾಧ್ಯಾಲಯಜೇ ವಧೂಜನಿಗೃಹಾತ್ಸ್ಯಾದ್ರಾಶಿಯೋಗಃ ಶುಭೋ**
**ಮಧ್ಯಸ್ತ್ರೈಕಸುಖರ್ಕ್ಷಜೇ ದ್ವ್ಯರಿಸುತರ್ಕ್ಷೋತ್ಥೇ ವನೇ ಚಾಶುಭಃ॥**
**ವಶ್ಯತ್ವಂ ಗೃಹಮಿತ್ರತೈಕ್ಯಮಪಿ ವಾ ಕಷ್ಟೋಪಿ ಸಃ ಸ್ಯಾಚ್ಛುಭಃ**
**ತತ್ರೈವಾಪಿ ಷಡಷ್ಟರಾಶಿರಭೋ ಜನ್ಮರ್ಕ್ಷವೇಧೋಸ್ತಿ ಚೇತ್॥ ॥೯॥**

**ಟಿ:** ವರನು ಸ್ತ್ರೀ ಜನ್ಮ ರಾಶಿಯುದೆಸೆಯಿಂದ ಸಪ್ತಮಾದಿ ಆರುರಾಶಿಗಳ ಪೈಕಿ ಯಾವುದಾದರೊಂದರಲ್ಲಿ ಜನಿಸಿದ್ದರೆ ಶುಭವಾದ "ರಾಶಿಕೂಟ" ವಾಗುವದು. ಸ್ತ್ರೀ ಜನ್ಮರಾಶಿಯಿಂದ ತೃತೀಯ, ಪ್ರಥಮ, ಅಥವಾ ಚತುರ್ಥ ರಾಶಿಯಲ್ಲಿ ಜನಿಸಿದ್ದರೆ ಮಧ್ಯಮವು ದ್ವಿತೀಯ, ಪಂಚಮ, ಷಷ್ಠರಾಶಿಯಲ್ಲಿ ಜನಿಸಿದ್ದರೆ ಅಶುಭವು. ಮುಂದೆ ಹೇಳುವ ವಶ್ಯಕೂಟ ಮತ್ತು ರಾಶಿಕೂಟಗಳಾದಲ್ಲಿ ಈ "ರಾಶಿಯೋಗ"ವು ಅಶುಭವಿದ್ದರೂ ಶುಭ ವಾಗುವದು. ಆದರೆ ಸ್ತ್ರೀ ಪುರುಷರ ನಕ್ಷತ್ರ ವೇಧವಿದ್ದು, ಷಷ್ಠಾಷ್ಟಕವಾದರೆ ವಶ್ಯಕೂಟ, ರಾಶಿಕೂಟಗಳಾದರೂ ಅಶುಭವಾಗುವದು.

**ಶಕ್ರಾಗ್ನ್ಯೋ ಭಗಭಾದ್ರಭೇಽಹಿನಿರ್ಋತೀ ಬುಧ್ನ್ಯಾರ್ಯಮರ್ಕ್ಷೇ ಶ್ರುತಿ-**
**ಶ್ರೀಕಂಠೌ ಚ ಮಘಾಂತ್ಯಭೇ ಜಲಗುರೂ ಮೈತ್ರಾಂತಕೌ ಕಾನಿಲೌ॥**
**ವಿಶ್ವಾದಿತ್ಯುಡುನೀ ದಿನೇಶವರುಣೌ ವಹ್ನಿದ್ವಿದೈವೌ ಮಿಥೋ ವೇಧಾ-**
**ದ್ಯೋಗಮುಡುದ್ವಯಂ ವಸುವಿಧುತ್ವಾಷ್ಟತ್ರಯಂ ನಾರ್ಹತಿ॥ ॥೧೦॥**

**ಟಿ:** ಜ್ಯೇಷ್ಠ, ಅಶ್ವಿನಿಗಳು ಉತ್ತರಾ, ಪೂರ್ವಾಭದ್ರೆಗಳು ಆಶ್ಲೇಷಾ, ಮೂಲಗಳು ಉತ್ತರಾಭದ್ರೆ, ಹುಬ್ಬೆಗಳು, ಶ್ರವಣ, ಆರ್ದ್ರೆಗಳು ಮಘಾ, ರೇವತಿಗಳು, ಪೂರ್ವಾಷಾಢ, ತಿಷ್ಯಗಳು ಅನುರಾಧಾ, ಭರಣಿಗಳು ರೋಹಿಣಿ ಸ್ವಾತಿಗಳು ಉತ್ತರಾಷಾಢ, ಪುನರ್ವಸುಗಳು' ಹಸ್ತ' ಶತಭಿಷ

ಗಳು ಕೃತ್ತಿಕಾ ವಿಶಾಖೆಗಳು ಈ ನಕ್ಷತ್ರ ಜೋಡಿಗಳು ಧನಿಷ್ಠಾ ಮೃಗಶೀರ್ಷ ಚಿತ್ರೆ, ಈ ತ್ರಯವೂ ಪರಸ್ಪರ ವೇದವಾಗುವದರಿಂದ ಮೇಲನವಾಗುವದಿಲ್ಲ.

ಏಕಸ್ಮಿನ್ ವನೇ ವರಸ್ಯ ಜನಿಭಂ ಪೂರ್ವಂ ಸ್ತ್ರೀಯಾಶ್ಚಾಪರಂಶಸ್ತಂ ಮಧ್ಯಮಮ್ ತಥಾ ತದಶುಭಂ ಚೈಕಂ ದ್ವಯೋಸ್ತಾರಕಂ ॥ ತತ್ರಾ-ಪ್ಯರ್ಯಮವಾರುತಾರ್ಯದಿನಕೃಚ್ಚಿತ್ರಾ ವಿಶಾಖೋತ್ತರಾವಿಶ್ರಾಂತ್ಯಾ ಚ್ಯುತವಾತ್ಮಕಾಶ್ವಿಶತಭೃತಾರ್ಕ್ಯೈಕ್ಯಮಾಹುಃ ಶುಭಂ ॥ ॥೧೧॥

ಟೀ: ಒಂದೇ ರಾಶಿಯಲ್ಲಿ ಹಿಂದಿನದು ವರನಕ್ಷತ್ರವಾಗಿ ಮುಂದಿನ ನಕ್ಷತ್ರವು ಸ್ತ್ರೀದಾಗಿದ್ದರೆ ಪ್ರಶಸ್ತವು, ಹೀಗಲ್ಲದೇ ಸ್ತ್ರೀ ನಕ್ಷತ್ರವು ಮೊದಲಾಗಿ ವರ ನಕ್ಷತ್ರವು ಮುಂದಿನದಾದರೆ ಮಧ್ಯಮವು. ಇಬ್ಬರ ನಕ್ಷತ್ರವೂ ಒಂದೇ ಆಗಿದ್ದರೆ ಅಶುಭವು. ಒಂದೇ ನಕ್ಷತ್ರದಲ್ಲಿಯಾದರೂ ಹುಬ್ಬಾ, ಸ್ವಾತಿ ತಿಷ್ಯ, ಹಸ್ತ, ಚಿತ್ರಾ, ವಿಶಾಖಾ, ಉತ್ತರಾ, ಉತ್ತರಾಷಾಢಾ, ಉತ್ರಾಭದ್ರಾ, ಅನುರಾಧಾ, ರೇವತಿ, ಶ್ರವಣ ಪುನರ್ವಸು, ರೋಹಿಣಿ, ಅಶ್ವಿನೀ, ಮೃಗಶೀರ್ಷ ಈ ನಕ್ಷತ್ರಗಳಲ್ಯಾವದಾದರೊಂದು ನಕ್ಷತ್ರವಾಗಿ-ದ್ದರೆ ನಕ್ಷತ್ರೈಕ್ಯವಾದರೂ ಅಡ್ಡಿ ಇಲ್ಲ.

ಸಿಂಹಾಳೀ ವಣಿಗಿಂದುಭೇ ಯುವತಿರಶ್ವಾಳೀ ತುಲಾ ತ್ರ್ಯಂತಭೇ ನಕ್ರಃ ಕರ್ಕ್ಯಬಲೇರ್ಝಷೋಜಕಲಶೌಮೇಷೋ ಮೃಗೋಜಾದಿಮೇ॥ ವಶ್ಯಾಃ ಸ್ತ್ರೀಜನಿತಾರಕಾದಿನನಕೇಷ್ವಾದ್ಯೇ ಚ ಮಧ್ಯೇಂತ್ಯಕೇನಿಷ್ಟಂ ವಶ್ಯಮಮುತ್ತಮಂ ಚ ಕಥಿತಂ ಪುಂಜನ್ಮಭಂ ಚೇತ್ಕ್ರಮಾತ್ ॥ ॥೧೨

ಟೀ: ವಶ್ಯಕೂಟ ಸ್ತ್ರೀರಾಶಿಯು ಮೇಷವಾಗಿದ್ದು ಪುರುಷರಾಶಿಯು, ಸಿಂಹ, ವೃಶ್ಚಿಕಗಳಲ್ಯಾವದಾದರೊಂದಾಗಿದ್ದರೆ ಸ್ತ್ರೀರಾಶಿ ವೃಷಭವಾಗಿದ್ದು ಪುರುಷರಾಶಿ ತುಲಾ, ಕರ್ಕಟಕಗಳಾದಲ್ಲಿ ಮಿಥುನವಾಗಿ ಕನ್ಯಾರಾಶಿಯಾದರೆ ಕರ್ಕಟಕವಾಗಿ ಧನು ವೃಶ್ಚಿಕಗಳಾದರೆ, ಸಿಂಹವಾಗಿ ತುಲೆಯಾದರೆ, ಕನ್ಯೆಯಾಗಿ ಮಿಥುನ ಮೀನಗಳಾದರೆ, ತುಲೆಯಾಗಿ ಮಕರವಾದರೆ, ವೃಶ್ಚಿಕ

ವಾಗಿ ಕರ್ಕ ಕನ್ಯೆಗಳಾದರೆ, ಧನುವಾಗಿ ಮೀನವಾದರೆ ಮಕರವಾಗಿ ಮೇಷ ಕುಂಭಗಳಾದರೆ, ಕುಂಭವಾಗಿ ಮೇಷವಾದರೆ, ಮೀನವಾಗಿ ಮಕರವಾದರೆ ವಶ್ಯಕೂಟವಾಗುವದೆಂದರ್ಥ. ಸ್ತ್ರೀಯ ಜನ್ಮತಾರೆಯಿಂದ ಪುರುಷತಾರೆಯು ೯ ನಕ್ಷತ್ರಗಳೊಳಗಾದರೆ ಅಶುಭವು. ೯ರಿಂದ ೧೮ರವರೆಗಾದರೆ ಮಧ್ಯಮವು. ೧೮ರಿಂದ ೨೭ರ ಒಳಗಾದರೆ ಉತ್ತಮವು. ಇದಕ್ಕೆ ಸ್ತ್ರೀ ದೀರ್ಘಕೂಟವೆನ್ನುತ್ತಾರೆ.

ದೇವಕ್ಷ್ಮಾಣ್ಯದಿತಿಶ್ರುತೀಡ್ಯರವಿಮಾಸ್ವಾತ್ಯಶ್ವಿಮೈತ್ರೇಂದವಃ
ತ್ರಿದ್ವ್ಯಂಧ್ರ್ಯರ್ಕ್ಷಕೃತಾಂತಧಾತೃಗಿರಿಶಾ ಮರ್ತ್ಯಾಃ ಪರೇ ಚಾಸುರಾಃ ॥
ಸ್ತ್ರೀನ್ರೋರೇಕಗಣರ್ಕ್ಷಜನ್ಮ ಶುಭದಂ ಮರ್ತ್ಯಾಮರತ್ವಂ ಶುಭಂ
ವೈರಂ ಸ್ಯಾತ್ಸುರದೈತ್ಯತಾ ಮೃತಿಕರೋ ರಕ್ಷೋನರರ್ಕ್ಷೋದ್ಭವಃ ॥
॥೧೩॥

ಟಿ: ಗಣಕೂಟ, ಪುನರ್ವಸು, ಶ್ರವಣ, ತಿಷ್ಯ, ಹಸ್ತ, ಸ್ವಾತಿ, ರೇವತಿ, ಅಶ್ವಿನಿ, ಅನುರಾಧಾ, ಮೃಗಶೀರ್ಷ ಹೀಗೆ ೯ ನಕ್ಷತ್ರಗಳು ದೇವನಕ್ಷತ್ರಗಳು. ಹುಬ್ಬಾ, ಉತ್ರಾ, ಪೂರ್ವಾಷಾಢ, ಉತ್ರಾಷಾಢ, ಪೂರ್ವಾಭದ್ರ, ಉತ್ರಾಭದ್ರಾ, ಭರಣಿ, ರೋಹಿಣಿ, ಆರ್ದ್ರಾ, ಹೀಗೆ ೯ ನಕ್ಷತ್ರಗಳು ಮನುಷ್ಯಗಣ ನಕ್ಷತ್ರಗಳು. ಉಳಿದ ೯ ನಕ್ಷತ್ರಗಳು ಅಂದರೆ ಕೃತ್ತಿಕಾ, ಆಶ್ಲೇಷಾ, ಮಘಾ, ಚಿತ್ರಾ, ವಿಶಾಖಾ, ಜ್ಯೇಷ್ಠಾ, ಮೂಲ, ಧನಿಷ್ಠಾ, ಶತಭಿಷೆ, ಇವು ರಾಕ್ಷಸಗಣ ನಕ್ಷತ್ರಗಳು. ವಧೂವರರ ನಕ್ಷತ್ರಗಳು ಒಂದೇ ಗಣದ್ದಾದರೆ ಶುಭವು. ಮನುಷ್ಯ ದೇವಗಣಗಳಾದರೂ ಶುಭವೇ ದೇವ ರಾಕ್ಷಸಗಳಾದರೆ ವೈರವಾದ್ದರಿಂದ ಅಶುಭವು. ರಾಕ್ಷಸ ಮನುಷ್ಯಗಳಾದರೆ ಮರಣಕಾರಕವು.

ಆರ್ದ್ರಾಭ್ಯಿಂದ್ರಭಗದ್ವಯಾದ್ವಯಹಯೇಶ್ವಿದಾಃ ಸ್ಮೃತಾ ರಜ್ಜು-
ಷ್ಪೋ ವಿಶ್ವಾಹ್ಯಗ್ನಿಮುರಾದ್ವಯಾದ್ವಯಭಪೌಷ್ಣಾಃ ಸ್ಯುಃ ಶಿರೋರಜ್ಜ-
ವಃ ॥ ಶೇಷಾ ಮಧ್ಯಮರಜ್ಜವೋತ್ರ ಶುಭದಃ ಸ್ಯಾದ್ಭಿನ್ನರಜ್ಜೂದ್ಭವಃ
ಸ್ತ್ರೀಪುಂಸೋರ್ಗ್ರಹಮಜ್ಜ್ಯವೇಧಮಿರಹಃ ಪೂಜ್ಯಃ ಸ್ವಜನ್ಮರ್ಕ್ಷಯೋಃ
॥೧೪॥

ಟೀ: ಆದ್ರ್ರಾ, ಪುನರ್ವಸು, ಶತಭಿಷ, ಪೂರ್ವಾಭದ್ರ, ಜ್ಯೇಷ್ಠಾ, ಮೂಲ ಉತ್ತರಾ, ಹಸ್ತ, ಅಶ್ವಿನೀ, ಇವು ಆದಿನಾಡಿನಕ್ಷತ್ರಗಳು. ಉತ್ತರಾಷಾಢ, ಶ್ರವಣ, ಆಶ್ಲೇಷಾ, ಮಘಾ, ಕೃತ್ತಿಕಾ, ರೋಹಿಣೀ, ಸ್ವಾತಿ, ವಿಶಾಖಾ, ರೇವತಿ ಈ ೯ ನಕ್ಷತ್ರಗಳು: ಅಂತ್ಯನಾಡಿಗಳು. ಉಳಿದ ಭರಣಿ ಮೃಗ ಶೀರ್ಷ, ತಿಷ್ಯ, ಪುಬ್ಬಾ, ಚಿತ್ರಾ, ಅನುರಾಧಾ ಪೂರ್ವಾಷಾಢ, ಧನಿಷ್ಠಾ ಉತ್ತರಾಭದ್ರಾ ಹೀಗೆ ೯ ನಕ್ಷತ್ರಗಳು ಮಧ್ಯನಾಡಿಗಳು. ವಧೂವರರು ಬೇರೆ ಬೇರೆ ನಾಡಿಗಳಲ್ಲಿ ಜನಿಸಿದ್ದರೆ ಶುಭವು. ಸ್ವಕೀಯ ಜನ್ಮನಕ್ಷತ್ರಗಳಲ್ಲಿ ಹಿಂದೆ ಹೇಳಲ್ಪಟ್ಟ "ಅರ್ಧರ್ಕ್ಷಾಣಿ" ಶ್ಲೋಕೋಕ್ತ ಗ್ರಹ ವರ್ಗೈಕ್ಯ ರಹಿತವಾಗಿರುವೆಯು ಶ್ರೇಷ್ಠವು.

ಭೇಷ್ವಶ್ವಾಂಗರಸೇಷು ಪಂಚಸು ಖಗಾ ಭೇರುಂಡಕಃ ಪಿಂಗಲಃ ಕಾಕಃ ಕುಕ್ಕುಟಬರ್ಹಿಣಾವಿಹ ವಿಹಂಗೈಕತ್ವಮಿಷ್ಟಂ ತಯೋಃ ॥ ಗೋತ್ರೈಕತ್ವಮನಿಷ್ಟಮೇಷು ನೃಪತೇರ್ಯೋಗೇಷು ಮುಖ್ಯೋಗಣಃ ಶ್ರೇಷ್ಠೌ ಶೂದ್ರವಿಶೋಸ್ತು ಯೋನಿನಿಲಯೌ ವಿಪ್ರಸ್ಯ ಭೇಶಃ ಶುಭಃ ॥
॥೧೫॥

ಟೀ: ಅಶ್ವಿನ್ಯಾದಿ ೫ ನಕ್ಷತ್ರಗಳಿಗೆ "ಭೇರುಂಡಕ" ಪಕ್ಷಿಗಳೆಂದೂ, ಆದ್ರ್ರಾದಿ ೬ ನಕ್ಷತ್ರಗಳಿಗೆ "ಪಿಂಗಲ" ಪಕ್ಷಿಯೆಂದೂ, ಜ್ಯೇಷ್ಠಾದಿ ೫ ನಕ್ಷತ್ರಗಳಿಗೆ "ಕುಕ್ಕುಟ" ಪಕ್ಷಿಯೆಂದೂ, ಧನಿಷ್ಠಾದಿ ೫ ನಕ್ಷತ್ರಗಳಿಗೆ "ನವಿಲು" ಪಕ್ಷಿಯೆಂದೂ, ಸಂಜ್ಞೆಗಳಿರುವವು. ವಿವಾಹದಲ್ಲಿ ಸ್ತ್ರೀ ಪುರುಷರ ನಕ್ಷತ್ರಗಳ ಏಕಪಕ್ಷಿತ್ವವಾಗುವಿಕೆಯು ಇಷ್ಟವು. ಜನ್ಮಗೋತ್ರಗಳ ಏಕತ್ವವು ಅನಿಷ್ಟವು. ಅಂದರೆ ಸ್ತ್ರೀಪುರುಷರ ಗೋತ್ರವು ಒಂದೇ ಆಗಬಾರದು. ಈ ಕೂಟಗಳ ಪೈಕಿ ಕ್ಷತ್ರಿಯರಿಗೆ ಗಣಕೂಟವೂ, ಶೂದ್ರರಿಗೆ ಯೋನಿಕೂಟವೂ ವೈಶ್ಯರಿಗೆ ರಾಶಿಕೂಟವೂ, ಶೂದ್ರರಿಗೆ ರಾಶ್ಯಧಿಪತಿತ್ವಕೂಟವೂ ಶ್ರೇಷ್ಠವಾದದ್ದು.

ಸಾವಿತ್ರಾನಿಲರೋಹಿಣೀಶಶಿಮಘಾಮೂಲಾಂತ್ಯಮಿತ್ರೋತ್ತರಾಃ
ಶಸ್ತಾಃ ಸತ್ತಿಥಯೋಽಖಿಲಾಶ್ಚ ದಿವಸಾ ರಾತ್ರಿಸ್ತು ಸೌರಾರಯೋಃ ॥
ಕನ್ಯಾಕರ್ಕಿತುಲಾಶ್ವಿಗೋಯುಮಝುಷಾಃ ಸಿಂಹೈಣಕುಂಭಾಶ್ಚ ವಾ

ಶ್ರೇಷ್ಠಾಸ್ತೇಪಿಗೃಹಾಃ ಶುಭಗ್ರಹಯುತಾಃ ಪಾಣಿಗ್ರಹೇsತ್ಯುತ್ತಮಾಃ॥ ॥೧೬॥

ಟೀ: ಹಸ್ತ, ಸ್ವಾತಿ, ರೋಹಿಣಿ, ಮೃಗಶಿರ್ಷ, ಮಘಾ, ಮೂಲ, ರೇವತಿ, ಅನುರಾಧಾ, ಉತ್ರಾ, ಉತ್ರಾಷಾಢ, ಉತ್ರಾಭದ್ರಾ ಹೀಗೆ ೧೧ ನಕ್ಷತ್ರ ಗಳು ಒಳ್ಳೇತಿಥಿಗಳುಂ ಇವು ವಿವಾಹಕ್ಕೆ ಶ್ರೇಷ್ಠಗಳು. ಕನ್ಯಾ, ಕರ್ಕ, ತುಲಾ ಧನು, ವೃಷಭ, ಮಿಥುನ, ಮೀನಲಗ್ನಗಳು ಶ್ರೇಷ್ಠಗಳು. ಗುರುಯುಕ್ತ ವಾದ ಸಿಂಹಲಗ್ನವೂ ಶುಕ್ರಯುಕ್ತಗಳಾದ ಮಕರ ಕುಂಭ ಲಗ್ನಗಳೂ ಶುಭಪ್ರದಗಳೇ ಆಗಿರುವವು.

ವಕ್ರಾರ್ರ್ಕೌ ತ್ರಿಷಡಾಯಭೇಷ್ವಹಿಶನೀ ತ್ರ್ಯಾಯಾರಿರಂಧ್ರೇಷು ವಿಜ್ಜೀ-
ವಾವವ್ಯಯರಂಧ್ರಭೇಷು ಶುಭದೌ ಚಂದ್ರೋ ಧನಾಯತ್ರಿಷು ॥
ಶುಕ್ರೋ ನಂತ್ಯಷಡಷ್ಟಭೇಷು ಶುಭದೋ ಲಗ್ನಾದ್ವಿಧ್ಯೋರ್ನ್ಯಧನೇ
ನೇಷ್ಟೋsಸ್ತೇಪ್ಯಶುಭಗ್ರಹೋsತ್ರಕಥಿತಃ ಕಾಲೋಯಮೌದ್ವಾಹಿಕಃ ॥೧೭॥

ಟೀ: ಕುಜ ಸೂರ್ಯರು ವಿವಾಹ ಲಗ್ನದ ದೆಸೆಯಿಂದ ತೃತೀಯ, ಷಷ್ಠ ಏಕಾದಶ ಸ್ಥಾನಗಳಲ್ಲಿ ರಾಹು, ಶನಿಗಳು ತೃತೀಯ ಏಕಾದಶ, ಷಷ್ಠಾಷ್ಟ ಮಸ್ಥಾನಗಳಲ್ಲಿ ಬುಧ, ಗುರುಗಳು ವ್ಯಯ, ಅಷ್ಟಮ, ರಹಿತಗಳಾದ ಸ್ಥಾನಗಳಲ್ಲಿ ಇದ್ದರೆ ಶುಭವಾಗುವದು. ಚಂದ್ರನು ದ್ವಿತೀಯ ಏಕಾದಶ ತೃತೀಯ ಸ್ಥಾನಗಳಲ್ಲಿ ಶುಕ್ರನು ದ್ವಾದಶ ಷಷ್ಠಾಷ್ಟಮಸ್ಥಾನ ರಹಿತಗಳಾ ದ ಸ್ಥಾನಗಳಲ್ಲಿ ಇದ್ದರೆ ಶುಭವು ಲಗ್ನಾತ್ ಆ ಕಾಲದ ಚಂದ್ರನ ದೆಸೆ-ಯಿಂದ ಅಷ್ಟಮದಲ್ಲಿ ಸಪ್ತಮದಲ್ಲಿಯಾಗಲೀ ಅಶುಭಗ್ರಹರಿದ್ದರೆ ಶುಭ ವಲ್ಲ. ಹೀಗೆ ಈ ವಿವಾಹಸಂಬಂಧದ ಮುಹೂರ್ತವು ಹೇಳಲ್ಪಟ್ಟಿತು.



# ॥ ಗೇಹಾರಂಭಾಧ್ಯಾಯಃ ॥

**ಅರ್ಕೇ ನಕ್ರಘಟಾ ಚ ಮೇಷವೃಷಭೌ ಕರ್ಕ್ಯರ್ಕಭೇ ತೌಲ್ಯಳೀ ಪ್ರಾಪ್ತೇ ಪೂರ್ವಮುಖಾಸು ದಿಕ್ಷು ಚ ಗೃಹೀ ಕುರ್ಯಾದ್ಗೃಹಾರಂಭಣಂ ॥ ತಸ್ಮಿನ್‌ವಿಷ್ಣುಮಘಾಶ್ವಿಶೂರ್ಪರಹಿತಾಃ ಶಸ್ತಾಃ ಶುಭಾಸ್ತಾರಕಾಃ ವಾರಾಃ ಸ್ಯುಸ್ತಿಥಯಃ ಸ್ಥಿರೋಭಯಗೃಹಾಃ ಶುದ್ಧಿಃ ಶುಭಾ ನೈಧನೇ ॥ ॥೧॥**

ಟಿ॥ ಗೃಹಸ್ಥನು ಸೂರ್ಯನು ಮಕರ ಕುಂಭಗಳಲ್ಲಿರುವಾಗ ಪೂರ್ವದಿಕ್ಕಿನ ಮನೆಯನ್ನು ಮೇಷ ವೃಷಭಗಳಲ್ಲಿ ಸೂರ್ಯನಿರುವಾಗ ದಕ್ಷಿಣ ದಿಕ್ಕಿನ ಮನೆಯನ್ನೂ ಕರ್ಕ ಸಿಂಹ ಮಾಸಗಳಲ್ಲಿ ಪಶ್ಚಿಮದಿಕ್ಕಿನ ಮನೆಯನ್ನೂ. ತುಲಾ ವೃಶ್ಚಿಕ ಮಾಸಗಳಲ್ಲಿ ಉತ್ತರ ದಿಕ್ಕಿನ ಮನೆಯನ್ನೂ ನಿರ್ಮಿಸಲಾರಂಭಿಸತಕ್ಕದ್ದು. ಗೃಹಾರಂಭದಲ್ಲಿ ಶ್ರವಣ, ಮಘಾ, ಅಶ್ವಿನಿ, ವಿಶಾಖಾ ರಹಿತಗಳಾದ ಶುಭ ಗಣ ನಕ್ಷತ್ರಗಳೂ ಶುಭವಾರ ತಿಥಿಗಳೂ ಸ್ಥಿರ ಉಭಯ ರಾಶಿಲಗ್ನಗಳೂ ಶುಭಕರಗಳಾಗುವವು. ಲಗ್ನಾತ್ ಅಷ್ಟಮದಲ್ಲಿ ಗ್ರಹರಿಲ್ಲದಿರುವಿಕೆಯು ಶುಭವು.

**ವಿಸ್ತಾರಾಯತಿರಾಶಿಮಗ್ನಿಗುಣಿತಂ ಕೃತ್ವಾ ಗೃಹಸ್ಯಾಷ್ಟಹೃಚ್ಛೇಷ್ಟಾಃ ಸ್ಯುರ್ಧ್ವಜಧೂಮಸಿಂಹಶುನಕೋಕ್ಷಾಣಃ ಖರೇಭೌ ಕ್ರಮಾತ್ ॥ ಆಯಾಃ ಕಾಕ ಇತಿ ಸ್ವದಿಕ್ಷು ಶುಭದಾಃ ಸರ್ವತ್ರ ಶಸ್ತೋ ಧ್ವಜಸ್ತಸ್ಮಿನ್‌ಅಷ್ಟಹತೇ ಧನಾಯಇನಹತ್ರಿಘ್ನೇ ವ್ಯಯಃ ಶಕ್ರಹತ್ ॥ ॥೨॥**

ಟಿ: ಮನೆಯ ಎರಡು ಪಾರ್ಶ್ವದ ಅಗಲ ಉದ್ದಗಳ ಗಜಪರಿಮಿತ (೨೪ ಅಂಗುಲಾತ್ಮಕ) ಪ್ರಮಾಣವನ್ನು ಮೂರರಿಂದ ಗುಣಿಸಿ ಎಂಟರಿಂದ ಭಾಗಿಸಿ ಕಳೆಗುಳಿದ ಶೇಷವು ೧ ಉಳಿದರೆ "ಧ್ವಜಾಯ"ವೂ ೨ ಉಳಿದರೆ ಧೂಮಾಯವೂ ೩ ಉಳಿದರೆ ಸಿಂಹಾಯವೂ ೪ ಉಳಿದರೆ ಶುನಕಾಯವು ೫ಉಳಿದರೆ ವೃಷಾಯವೂ ೬ಉಳಿದರೆ ಖರಾಯವೊ ೭ಉಳಿದರೆ ಗಜಾಯವೊ ೮ ಉಳಿದರೆ ಕಾಕಾಯವು ಬರುವವು, ಧ್ವಜಾಯವೂ ಪೂರ್ವದಿಕ್ಕಿನ

ಪಂನೆಗೂ ಧೂಮವು ಆಗ್ನೇಯಕ್ಕೂ ಸಿಂಹವು ದಕ್ಷಿಣಕ್ಕೂ, ಶುನಕವು ನೈರುತ್ಯಕ್ಕೂ ವೃಷಭಾಯವು ಪಶ್ಚಿಮಕ್ಕೂ ಖರವು ವಾಯುವ್ಯಕ್ಕೂ ಗಜಾಯವು ಉತ್ತರಕ್ಕೂ ಕಾಕವು ಈಶಾನ್ಯಕ್ಕೂ ಶುಭಕರಗಳಾಗುವವು. "ಧ್ವಜಾಯವು" ಎಲ್ಲಾ ದಿಕ್ಕಿಗೂ ಶುಭವು. ಆಪೂರ್ವೋಕ್ತ ಪ್ರಮಾಣವನ್ನು ಎಂಟರಿಂದ ಗುಣಿಸಿ ೧೨ರಿಂದ ಭಾಗಿಸಿ ಉಳಿದ ಶೇಷವು ಧನವು ಬರುವದು. ಪುನಃ ೩ರಿಂದ ಗುಣಿಸಿ ೧೪ರಿಂದ ಭಾಗಿಸಿ ಬಂದ ಶೇಷವು ಋಣವಾಗುವದು.

ವಿಂದ್ಯಾದ್ವಾರುಗ್ಯಹಾರ್ಥವಾಹ್ಯನಿಧಿಭೇ ಕೃಷ್ಣೇ ಚ ರಾಶೇರ್ನ್ಯಸೇತ್
ಅರ್ಕಸ್ಥಾದ್ದಶಮರ್ಕ್ಷದಿಶ್ಯಪಿ ಶಿಭಾಸ್ತಂಭಾದ್ಯಮಿಂದೂದಯೇ ॥
ವಾರುಣ್ಯಾದಿಚರರ್ಕ್ಷದಿಶ್ಯಪಿ ತಥಾ ಪ್ರಾಚ್ಯಾದಿದಿಕ್ ಸದ್ಮನಾಂ ದ್ವಾರಂ
ಚಾಹ್ನಿ ಶುಭೇ ಗೃಹಂ ಭೃಗುಸುತೇ ಲಗ್ನೇ ಕೃನ್ಯೈಶ್ಛಾದಯೇತ್ ॥
॥೩॥

ಟೀ: ಮನೆಯ ಸಂಬಂಧವಾದ ಕಟ್ಟಿಗೆಯನ್ನು ಕೃಷ್ಣ ಪಕ್ಷದಲ್ಲಿ ತಿಷ್ಯ, ರೋಹಿಣಿ, ನಕ್ಷತ್ರಗಳಲ್ಲಿ ಕಡಿಯತಕ್ಕದ್ದು. ಪ್ರಥಮ ಶಿಲಾಸ್ತಂಭ (ಕೋನಶಿಲಾ)ವನ್ನು ಚಂದ್ರನಿರುವ ರಾಶಿಲಗ್ನದಲ್ಲಿ ಸೂರ್ಯನಿರುವ ರಾಶಿಯಿಂದ ದಶಮರಾಶಿಯ ದಿಗ್ಭಾಗದಲ್ಲಿ (ಮೇಷ ವೃಷಭಗಳಿಗೆ ಪೂರ್ವ, ಮಿಥುನಕ್ಕೆ ಆಗ್ನೇಯ, ಕರ್ಕ ಸಿಂಹಗಳಿಗೆ ದಕ್ಷಿಣ, ಕನ್ಯೆಗೆ ನಿರುತ್ರಿ, ತುಲಾ ವೃಶ್ಚಿಕಗಳಿಗೆ ಪಶ್ಚಿಮ, ಧನುಸ್ಸಿಗೆ ವಾಯುವ್ಯ, ಮಕರ ಕುಂಭಗಳಿಗೆ ಉತ್ತರ, ಮೀನಕ್ಕೆ "ಈಶಾನ್ಯ" ಈ ಕ್ರಮದಿಂದ ದಿಕ್ಕನ್ನು ತಿಳಿದು) ಸ್ಥಾಪಿಸತಕ್ಕದ್ದು. ಮುಖ್ಯದ್ವಾರವನ್ನು ಶುಭತಾರಾದಿ ಗಣಯುಕ್ತವಾದ ಚಂದ್ರೋದಯ ಲಗ್ನದಲ್ಲಿ ಪೂರ್ವಾದಿ ದಿಕ್ಕಿನಮನೆಗಳ ಅಂದರೆ ಪೂರ್ವದ ಮನೆಗೆ ಪಶ್ಚಿಮ ದಿಕ್ಕಿನಲ್ಲೂ ದಕ್ಷಿಣದಿಕ್ಕಿನ ಮನೆಗೆ ಉತ್ತರದಿಕ್ಕಿನಲ್ಲೂ ಪಶ್ಚಿಮದಿಕ್ಕಿನ ಮನೆಗೆ ಪೂರ್ವದಿಕ್ಕಿನಲ್ಲೂ ಉತ್ತರದ ಮನೆಗೆ ದಕ್ಷಿಣದಿಕ್ಕಿನಲ್ಲೂ ರಾಶಿಗಳ ದಿಕ್ಕುಗಳ ಪೈಕಿ ಚರರಾಶಿಯ ದಿಕ್ಕು ಯಾವದೋ ಆ ದಿಕ್ಕಿನಲ್ಲಿ ಸಿಲ್ಲಿಸತಕ್ಕದ್ದು. ಶುಭತಾರಾದಿಯುಕ್ತವಾದ ದಿವಸದಲ್ಲಿ ಶುಕ್ರಯುಕ್ತವಾದ ಲಗ್ನದಲ್ಲಿ ಮನೆಯನ್ನು ಹುಲ್ಲು ಮೊದಲಾದವುಗಳಿಂದ ಮೊದಿಸತಕ್ಕದ್ದು.

ಷಾಕೋಲೂಖಲಧೇನುಧುನ್ಯಭವನಾನ್ಯರ್ಕೇ ದ್ವಿದೇಹರ್ಕ್ಷಗೇ ವಿಶ್ವ

ಚಾರ್ಯನುಘಾಚ್ಯುತೇಷ್ವಪಿ ಮರುಧ್ಭಾಗ್ಯೇ ಚ ಶಯ್ಯಾಗಹಂ ॥
ಪುಷ್ಯಾಂತ್ಯಾಶ್ವಿಮಘಾಜಮಾತ್ರ ಶಶಧೃನ್ಮಿತ್ರೋತ್ತರಾಸು ಸ್ಥಿರೇರಾಶೌ
ರಾಜಸಭಾಸುರಾಲಯಮುಖ್ಯನ್ಯಹನ್ಯುತ್ತಮೋ ಕಾರಯೇತ್ ॥ ॥೪॥

**ಟಿ:** ಅಡಿಗೆಮನೆ, ಧಾನ್ಯಕಟ್ಟುವ ಮನೆ, ದನಗಳನ್ನು ಕಟ್ಟುವ ಕೊಟ್ಟಿಗೆ, ಧಾನ್ಯ ಇಡುವ ಮನೆ, ಇವುಗಳನ್ನು ಸೂರ್ಯನು ಮಿಥುನ, ಕನ್ಯಾ, ಧನು, ಮೀನಗಳಲ್ಲಿರುವಾಗ ಉತ್ತಮವಾದ ದಿವಸದಲ್ಲಿ ಉತ್ತರಾಷಾಢ, ರೋಹಿಣಿ, ತಿಷ್ಯ, ಮಘಾ, ಶ್ರವಣ ನಕ್ಷತ್ರಗಳಲ್ಲಿಯೂ ಶಯನ ಗೃಹ ವನ್ನು ಸ್ವಾತಿ, ಉತ್ತರೆಗಳಲ್ಲಿಯೂ ರಾಜಸಭಾ ದೇವಾಲಯ ಖಜಾನೆಯ ಮನೆ, ಇವುಗಳನ್ನು ತಿಷ್ಯ, ರೇವತಿ, ಅಶ್ವಿನಿ, ಮಘಾ, ರೋಹಿಣಿ, ಪುನ ರ್ವಸು, ಮೃಗಶೀರ್ಷ, ಅನುರಾಧಾ, ಉತ್ತರಾ, ಉತ್ತರಾಷಾಢ, ಉತ್ತರಾ ಭದ್ರಾ ಮತ್ತು ಸ್ಥಿರರಾಶಿಲಗ್ನದಲ್ಲಿ ಮಾಡತಕ್ಕದ್ದು.

ಚಂದ್ರೇ ಕರ್ಕಿವೃಷಸ್ಥಿತೇ ತನುಗತೇ ಕೇಂದ್ರತ್ರಿಕೋಣೇ ಗುರೌ
ಗೋತೌಲ್ಯಂತ್ಯಗೃಹಸ್ಥಿತೇ ಚ ತನುಗೇ ಶುಕ್ರೇ ಗುರೌ ಕೇಂದ್ರಗೇ॥
ಲಗ್ನೇಶೇ ಸ್ವಗೃಹೋಚ್ಚ ಮಿತಗೃಹಗೇ ಲಗ್ನೇ ಸ್ಥಿತೇ ವಾ ಕೃತಂ
ಗೇಹಂ ಸ್ಯಾತ್ಸುಚಿರಂ ಶ್ರಿಯಾ ಚ ಸಹಿತಂ ನಿರ್ಬಾಧಮೇವಾವನೌ ॥
॥೫॥

**ಟಿ:** ಕರ್ಕ ಅಥವಾ ವೃಷಭದಲ್ಲಿರುವ ಚಂದ್ರನು ಲಗ್ನವನ್ನು ಹೊಂದಿದ್ದು ಗುರುವು ಕೇಂದ್ರ ಅಥವಾ ತ್ರಿಕೋಣದಲ್ಲಿರುವಾಗ ವೃಷಭ, ತುಲಾ, ಮೀನ ರಾಶಿಗಳಲ್ಲಿರುವ ಶುಕ್ರನು ಲಗ್ನದಲ್ಲಿದ್ದು ಗುರುವು ಕೇಂದ್ರದಲ್ಲಿರು ವಾಗ ಲಗ್ನಾಧಿಪತಿಯು ಸ್ವಗೃಹ, ಉಚ್ಚರಾಶಿ ಅಥವಾ ಮಿತ್ರ ರಾಶಿಯಲ್ಲಿದ್ದು ಅಥವಾ ಲಗ್ನದಲ್ಲಿರುವಾಗ ಕಟ್ಟಲ್ಪಟ್ಟ ಗೃಹವು ಭೂಮಿ ಯಲ್ಲಿ ಬಹುಕಾಲ ಸಂಪತ್ಸಮೃದ್ಧಿಯಿಂದಲೂ ಅಪಾಯರಹಿತತ್ವದಿಂದಲೂ ಬಾಳುವದು.

ಕನ್ಯಾಕರ್ಕಿಘಟೋಝ್ಝಿತೇ ದಿನಕರೇವಾಕ್ಪ್ರೃಷ್ಠಗೇ ಭಾರ್ಗವೇ ರಾ-
ಶೌ ಸ್ವೋಪಚಯೇ ಸ್ಥಿರೋಭಯಗೃಹೇ ಸದ್ವಾಸರೇ ಸತ್ತಿಥೌ ॥
ಮಿಂತ್ರಾಂತ್ಯಾಜವಸೂತ್ತರಾ ಬ್ಜದಿನಕೃಚ್ಚಿತ್ರಾಸು ನವ್ಯಂ ಗೃಹಂ
ಶುದ್ಧೇಂತ್ಯೇ ಚ ಗೃಹೀ ವಿಶೇದುಪಚಯೇ ಪಾಪೇ ಚ ಕೇಂದ್ರೇ
ಶುಭೇ ॥ ॥೬॥

ಟಿ: "ನವಾಗಾರ ಪ್ರವೇಶವುಹೂರ್ತ" — ಸೂರ್ಯನು ಕನ್ಯಾ, ಕರ್ಕ, ಕುಂಭರಹಿತಗಳಾದ ಸ್ಥಾನದಲ್ಲಿದು ಶುಕ್ರನು ದಕ್ಷಿಣ ಅಥವಾ ಪೃಷ್ಠಭಾಗ ದಲ್ಲಿರುವಾಗ ಗುರು, ಶುಕ್ರರು ಕೇಂದ್ರರಾಶಿಯಲ್ಲಿರುತ್ತಿತಲು ಪಾಪಗ್ರಹ ರು ಉಪಚಯರಾಶಿಗಳಲ್ಲಿರುವಾಗ ಲಗ್ನಾತ್ ವ್ಯಯರಾಶಿಯು ಗ್ರಹರಹಿತ ವಾಗಿರುವಾಗ ಶುಭಗ್ರಹರ ವಾರಗಳಲ್ಲಿ ಶುಭ ತಿಥಿಗಳಲ್ಲಿ ಅನುರಾಧಾ, ರೇವತಿ, ರೋಹಿಣಿ, ಧನಿಷ್ಠಾ ಉತ್ತರಾ ಉತ್ತರಾಷಾಢ, ಉತ್ತರಭದ್ರಾ, ಮೃಗಶೀರ್ಷ, ಹಸ್ತ, ಚಿತ್ರಾ, ನಕ್ಷತ್ರಗಳಲ್ಲಿ ಸ್ಥಿರ ಅಥವಾ ಉಭಯರಾಶಿ ಲಗ್ನದಲ್ಲಿ ಜನ್ಮರಾಶಿ ಅಥವಾ ಚಂದ್ರರಾಶಿಯಿಂದ ಉಪಚಯರಾಶಿ ಲಗ್ನ ದಲ್ಲಿ ಗೃಹಸ್ಥನು ಹೊಸ ಮನೆಯನ್ನು ಪ್ರವೇಶಿಸತಕ್ಕದ್ದು.

ಚಿತ್ರಾರ್ಕೇಂದುವಸೂತ್ತರಾದಿತಿಮರುತ್ತಿಷ್ಯಾನುರಾಧಾಶ್ವಿನೀಪೌಷ್ಣ ಶ್ರೀ ಪತಿರೋಹಿಣೀವರುಣಭೇ ರಾಶೌ ಸ್ಥಿರೇ ಚೋಭಯೇ ॥ ಜೀವೇಂ- ದೂಶನಸಾಂ ದಿನೇ ನವವಧೂವೇಶ್ಮಪ್ರವೇಶಃ ಶುಭಃ ತ್ಯಾಜ್ಯಾ ಸ್ಯಾ ನ್ನವಮೀ ದಿನಂ ಚ ನವವರಂ ಯಾತುಃ ಪ್ರವೇಶೇ ಪುನಃ ॥ ॥೮॥

ಟಿ: ಚಿತ್ರಾ, ಹಸ್ತ, ಮೃಗಶೀರ್ಷ, ಧನಿಷ್ಠಾ, ಉತ್ತರಾ, ಉತ್ತರಾಷಾಢ, ಉತ್ತರಾಭದ್ರಾ, ಪುನರ್ವಸು, ಸ್ವಾತಿ, ತಿಷ್ಯ, ಅನುರಾಧಾ, ಅಶ್ವಿನಿ, ರೇವತಿ, ಶ್ರವಣ, ರೋಹಿಣಿ, ಶತಭಿಷ, ನಕ್ಷತ್ರಗಳಲ್ಲಿ ಸ್ಥಿರ ಉಭಯ ರಾಶಿಲಗ್ನ ದಲ್ಲಿ ಗುರು' ಚಂದ್ರ, ಶುಕ್ರವಾರಗಳಲ್ಲಿ ನವವಧೂ ಗೃಹಪ್ರವೇಶವು ಶುಭ ಕರವು. ಸಾಮಾನ್ಯವಾಗಿ ಮನೆಯಿಂದ ಹೊರಟುಹೋದವರಿಗೆ ಪುನಃ ಮನೆಯನ್ನು ಪ್ರವೇಶಿಸಲಿಕ್ಕೆ ೯ನೇ ದಿವಸವೂ ನವಮೀ ತಿಥಿಯೂ ನಿಷಿದ್ಧ ವಾದದ್ದು.

ಅಗ್ನ್ಯಾಧಾನವಿಹೋತ್ತರಾಯಣಗತೇ ಸೂರ್ಯೇಚ್ಛಪಕ್ಷೇ ಗುರೌ ತ್ವಾಷ್ಟ್ರೈಂದ್ರಾಗ್ನ್ಯಯುಗೋತ್ತರಾಂತ್ಯಬಲಬಿಷ್ವಾಹ್ಮೇಷು ಪೂರ್ಣಾ- ತಿಥೌ ॥ ಮೀನಾರ್ಕೀಂದುಗೃಹೋನಭೇಹನಿ ಶುಭೇ ಕುರ್ಯಾದನಿಂ ದೌ ತನೌ ರಂಧ್ರೇನಿಂದುಕುಜೇ ತತೀತಿ ಭವನಾರಂಭಾದಿಕಾಲಃ ಸ್ಮೃತಃ ॥ ॥೮॥

ಟಿ: ಈ ಗೃಹದಲ್ಲಿ ಸೂರ್ಯನು ಉತ್ತರಾಯಣದಲ್ಲಿರುವಾಗ ಶುಭವಾರದಲ್ಲಿ

ಶುಕ್ಲಪಕ್ಷದಲ್ಲಿ ಪಂಚಮೀ ದಶಮೀ ಪಂಚದಶೀ ತಿಥಿಗಳಲ್ಲಿ ತಿಷ್ಯ ಚಿತ್ರ ವಿಶಾಖಾ ಅನುರಾಧಾ ಉತ್ತರಾ ಉತ್ತ್ರಾಷಾಢಾ ಉತ್ತರಾಭದ್ರ ರೇವತೀ ಜ್ಯೇಷ್ಠ ರೋಹಿಣೀ ನಕ್ಷತ್ರಗಳಲ್ಲಿ ಲಗ್ನದಿಂದ ಅಷ್ಟಮವು ಚಂದ್ರ-ಕುಜರಿಂದ ರಹಿತವಾಗಿರುವಾಗ ಮೀನ ಮಕರ ಕುಂಭ ಕರ್ಕ ರಾಶಿರಹಿತವಾದ ಲಗ್ನದಲ್ಲಿ ಅಗ್ನ್ಯಾಧಾನ ಮಾಡತಕ್ಕದ್ದು. ಹೀಗೆ ಈ ಗೇಹಾರಂಭ ಪ್ರವೇಶ ಅಧ್ಯಾಯವು ಹೇಳಲ್ಪಟ್ಟಿತು.



## " ಅಥ ಕೃಷ್ಯಾದಿ ಕರ್ಮಾಧ್ಯಾಯಃ "

ಕೃಷ್ಯರ್ಥಂ ಗಿರಿಶಾಶ್ವಿಮಿತ್ರಭರಣೀಪೂರ್ವೋತ್ತರಾಪಿತ್ರಜ ಸ್ವಾತೀಷ್ವಾರ್ಯಕುಜಕ್ಷ್ಮಾಕರವಿದಾಂ ವಾರೇಶುಭಾನಾಂಗೃಹೇಽಪಿ ಆರಣ್ಯ ಪ್ರಥಮ ಪ್ರವೇಶಖನನಂ ದಾಹಂ ಚ ಕುರ್ಯಾತ್ಸ್ವನಃ ತಸ್ಮಿನ್ ಶೂರ್ಪ–
ಯುಗಾಶ್ವಿಧಾತ್ಮಷುಕ್ಕೃಷಿಂ ಮಾಷೇಕವೇಶ್ಮೋದಯೇ ॥೧॥

ಟೀ॥ ಆರಣ್ಯದಲ್ಲಿ ಮಾಡತಕ್ಕ ಕೃಷಿಯನ್ನು ಹೇಳುತ್ತಾನೆ. ಅರಣ್ಯದಲ್ಲಿ ಕೃಷಿ ಮಾಡುವವರು ಆರ್ದ್ರಾ, ಅಶ್ವಿನಿ, ಅನುರಾಧಾ, ಭರಣೀ, ಹುಬ್ಬಾ ಪೂರ್ವಾಷಾಢ, ಪೂರ್ವಾಭದ್ರಾ, ಉತ್ತರಾ, ಉತ್ತರಾಷಾಢ, ಉತ್ತ್ರಾಭದ್ರಾ, ಮಘಾ, ರೋಹಿಣಿ, ಸ್ವಾತೀ ನಕ್ಷತ್ರಗಳಲ್ಲಿ ಗುರು, ಕುಜ, ಚಂದ್ರ, ಅಥವಾ ಬುಧವಾರಗಳಲ್ಲಿ ಶುಭ ಗ್ರಹರ ರಾಶಿ (ಲಗ್ನ)ದಲ್ಲಿ ಅರಣ್ಯದಲ್ಲಿ ಪ್ರಥಮಪ್ರವೇಶ ಹಾಗೂ ಕಡಿಯೋಣ ಮಾಡಿ ತೃಣಾದಿಗಳನ್ನು ಸುಡತಕ್ಕದ್ದು ಅಲ್ಲಿ ವಿಶಾಖಾ, ಅನುರಾಧಾ, ಅಶ್ವಿನೀ, ರೋಹಿಣೀ, ನಕ್ಷತ್ರಗಳಲ್ಲಿ ಶುಕ್ರನವಾರ ಶುಕ್ರನು ಮೂಡುವ ಲಗ್ನದಲ್ಲಿ ಕೃಷಿ (ಆಗಿಯೋಣ)ಯನ್ನು ಪ್ರಾರಂಭಿಸತಕ್ಕದ್ದು.

ಮಿತ್ರಾಜಾದಿತಿ ಮೂಲಪೌಷ್ಣದಿಸ ಕೃತ್ಸ್ಪಷ್ಟ್ಯಚ್ಯುತೇಂದೂತ್ತರಾಃ
ಭದೈತ್ರೀಣಾಸ್ತಿಥಯಃ ಸಿತಾಮರಗುರುಬ್ರಧ್ನೇಂದುವಿದ್ವಾಸರಾಃ ॥
ಪಂಚಾಸ್ಯೈಣಿಘಟಾನ್ವಿತಾಃ ಶುಭಗ್ರಹಾಃ ಶಾರ್ದೂಲಸಿಂಹದ್ವಿಷಾಃ

ಕೃಷ್ಯಾರಂಭವಿಧೌ ಭವಂತಿ ಶುಭದಾಃ ಸೂರ್ಯೋದಯಾಃ ಸ್ಯುರ್ಭೃಭೇಃ॥
॥೨॥

ಟಿ: ಗದ್ದೆ ತೋಟ ಮೊದಲಾದವುಗಳಲ್ಲಿ ಅನುರಾಧೆ, ರೋಹಿಣಿ. ಪುನರ್ವಸು, ಮೂಲ, ರೇವತಿ, ಹಸ್ತ, ತಿಷ್ಯ, ಶ್ರವಣ, ಮೃಗಶಿರ, ಉತ್ತರಾ, ಉತ್ತರಾಷಾಢ, ಉತ್ತರಾಭದ್ರಾ, ನಕ್ಷತ್ರಗಳು ಬಿದಿಗೆ, ಸಪ್ತಮೀ, ದ್ವಾದಶೀ, ರಹಿತಗಳಾದ ತಿಥಿಗಳು ಶುಕ್ರ, ಗುರು, ರವಿ, ಚಂದ್ರ, ಬುಧವಾರಗಳು ಸಿಂಹ, ಮಕರ, ಕುಂಭ, ಹಾಗೂ ಶುಭರಾಶಿ ಲಗ್ನಗಳು ಬಾಲವ, ಬವ, ಗರಜ, ಕರಣಗಳು ಇವುಗಳಲ್ಲಿ ಪ್ರಾರಂಭಿಸುವದು ಶುಭಕರವು. ಮತ್ತು ಸೂರ್ಯೋದಯಕಾಲವೂ ಕೃಷಿಗೆ ಶುಭಕರವು.

ಮೂಲಾಶ್ವೀಂದುಗುರೂತ್ತರಾವಸುಮರುನ್ಮಿತ್ರಾರ್ಕಪೂರ್ವಾಚ್ಯುತಬ್ರ-
ಹ್ಮಾಂತ್ಯಾದಿತಿವಾರುಣೇಷು ಕರಣೇ ವ್ಯಾಘ್ರೇಭಸಿಂಹಾಹ್ವಯೇ ॥
ಸದ್ವಾರೇ ಸುತಿಥೌ ಹಯಾಲಿವನಿತಾಜೋನೇಷು ಭೇಷ್ವಷ್ಟಮೇ
ಶುದ್ಧೇ ಮಾ ಪೃಥಿವೀಂ ಸಮ್ಯಗರ್ಚ್ಯ ಕೃಷಿಕೃದ್ಬೀಜಾನಿ ಸಮ್ಯಗ್ವಪೇತ್
॥೩॥

ಟಿ: ಮೂಲ, ಅಶ್ವಿನೀ, ಮೃಗಶಿರ್ಷ, ತಿಷ್ಯ, ಉತ್ತರಾ, ಉತ್ತರಾಷಾಢ, ಉತ್ತರಾಭದ್ರಾ, ಧನಿಷ್ಠಾ, ಸ್ವಾತೀ, ಅನುರಾಧಾ, ಹಸ್ತ, ವಿಶಾಖಾ, ಶ್ರವಣ, ರೋಹಿಣಿ, ರೇವತೀ, ಪುನರ್ವಸು, ಶತಭಿಷ, ನಕ್ಷತ್ರಗಳಲ್ಲಿ ಬಾಲವ, ಗರಜ, ಬವ, ಕರಣಗಳಲ್ಲಿ ಶುಭಗ್ರಹರ ವಾರದಲ್ಲಿ ಶುಭತಿಥಿಗಳಲ್ಲಿ ಧನು ವೃಶ್ಚಿಕ, ಕನ್ಯಾ, ಮೇಷರಹಿತವಾದ ಲಗ್ನಗಳಲ್ಲಿ ಲಗ್ನಾತ್ ಅಷ್ಟಮ ಶುದ್ಧಿ ಇರುವಾಗ ಕೃಷಿಕನು ಭೂದೇವಿಯನ್ನು ಪೂಜಿಸಿ ಬೀಜಗಳನ್ನು ಬಿತ್ತುವದು.

ಮಾರ್ತಂಡಸ್ಯ ದಿನೋದಯೇ ಭುವಿ ವಪೇದ್ವ್ರೀಹೀನ್ ಕುಳಿತ್ಥಾನ್-
ಮಹೀಸೂನೋಶ್ಚಂದ್ರಮಸೋದ್ಯಮೌಷಧಿಲತಾಬೀಜಾನಿ ಪೂಗಾನ್-
ವಿದಃ ॥ ಬೀಜಾನ್ಯಂಗಿರಸೋಖಿಲಾನಿ ಚ ತಥಾ ಬೀಜಾನಿ ರಕ್ತೋ-
ತ್ಪಲಾ ನ್ಯರ್ಕೇರ್ದೈತ್ಯಗುರೋಃ ಸುಗಂಧಿಸುಮನೋಬೀಜಾನಿ
ವಾರೋದಯೇ ॥ ॥೪॥

**ಟಿ:** ರವಿವಾರ ಸೂರ್ಯೋದಯದಲ್ಲಿ ಭೂಮಿಯಲ್ಲಿ ಭತ್ತವನ್ನು ಬಿತ್ತ ಪವು ಇದರಂತೆ ಕುಜನವಾರೋದಯದಲ್ಲಿ ಹುರುಳಿಯನ್ನೂ ಚಂದ್ರನ-ವಾರೋದಯದಲ್ಲಿ ವೃಕ್ಷ, ಬಳ್ಳಿ, ಮೊದಲಾದವುಗಳ ಬೀಜಗಳನ್ನೂ ಬುಧನವಾರೋದಯದಲ್ಲಿ ಅಡಿಕೆಮರಗಳನ್ನೂ ಗುರುವಿನವಾರೋದಯದಲ್ಲಿ ಸಮಸ್ತ ಬೀಜಗಳನ್ನೂ ಶನಿಯವಾರೋದಯದಲ್ಲಿ ಕೆಂಪು ವರ್ಣದ ಬೀಜಗಳನ್ನೂ ಶುಕ್ರನವಾರೋದಯದಲ್ಲಿ ಪರಿಮಳಯುಕ್ತವಾದ ಮಲ್ಲಿಗೆ ಸೇವಂತಿಗೆ ಕೇತಕಿ ಮೊದಲಾದವುಗಳನ್ನು ನೆಡತಕ್ಕದ್ದು.

**ಅಶ್ವಿಂದ್ವಾತ್ಮನಿ ನಾಳಿಕೇರಪನಸಾನ್ ರಂಭೇಕ್ಷುಪೂಗಾನಹೌ ಕೂಷ್ಮಾಂಡಾದ್ಯನುಜೇಯಮೇಚ ಬೃಹತೀಂ ಚೂತಂಮಘಾಂತ್ಯಾಂಶಕೇ ॥ ಮುದ್ಗಾಂ ತ್ವಷ್ಟರಿ ಕೃಷ್ಣಧಾನ್ಯಮುಡಧೌ ಮೂಲೇ ಚ ಕಂದಂ ಲತಾಮೂರ್ಧ್ವಗಸೋಡ್ಯಗೃಹೇಷು ಬೀಜಮಖಿಲಂ ಚಂದ್ರೋದಯೇ ವಾ ವಪೇತ್ ॥ ॥೫॥**

**ಟಿ:** ಅಶ್ವಿನೀ ನಕ್ಷತ್ರದಲ್ಲಿ ಚಂದ್ರಸಹಿತವಾದ ಲಗ್ನದಲ್ಲಿ ತೆಂಗು ಹಲಸುಗಳನ್ನೂ ಆಶ್ಲೇಷಾನಕ್ಷತ್ರದಲ್ಲಿ ಬಾಳೆ ಕಬ್ಬು, ಅಡಿಕೆಸಸಿಗಳನ್ನೂ ರೋಹಿಣಿಯಲ್ಲಿ ಕುಂಬಳ ಮೊದಲಾದವನ್ನೂ ಭರಣಿಯಲ್ಲಿ ಗುಳ್ಳಬದನೆಗಳನ್ನೂ ಮಘೆಯ ಅಂತ್ಯಪಾದದಲ್ಲಿ ಮಾವಿನ ಸಸಿಯನ್ನೂ ಚಿತ್ರಾನಕ್ಷತ್ರದಲ್ಲಿ ಪಚ್ಚೆಸರನ್ನೂ ಶತಭಿಷ ನಕ್ಷತ್ರದಲ್ಲಿ ಕಪ್ಪು ಧಾನ್ಯವನ್ನೂ ಮೂಲನಕ್ಷತ್ರದಲ್ಲಿ ಗಡ್ಡೆ ಬಳ್ಳಿಗಳನ್ನೂ ಊರ್ಧ್ವಮುಖ ನಕ್ಷತ್ರರಾಶಿಗಳಲ್ಲಿ ಹಾಗೂ ಚಂದ್ರೋದಯ ಲಗ್ನರಾಶಿಯಲ್ಲಿ ಸಮಸ್ತ ಬೀಜವನ್ನೂ ಬಿತ್ತತಕ್ಕದ್ದು.

**ಕೂಪಾದೀನಿ ಖನೇತ್ತತಃ ಸಲಿಲಭೇ ಚಂದ್ರೋದಯೇ ತತ್ಪಯೋನಿಃಸ್ರಾವಂ ಫಲಶಾಖಿನಾಮಖಿಲಸಸ್ಯಾನಾಂ ವಿದದ್ಯಾತ್ತಥಾ ॥ ಭೂಯಸ್ತತ್ಪರಿರಕ್ಷಣಾರ್ಥಮುದಯೇ ಕುಂಭಾರ್ಧನುಃ ಸಿಂಹಯೋರಂಶೇಂತ್ಯೇ ಪಿತುರಾದಿಮೇ ಮಘವತೋ ಬುಧ್ನ್ಯಸ್ಯ ಮಧ್ಯೇ ಕಾಟೀಂ ॥ ॥೬॥**

**ಟಿ:** ಬೀಜ ಬಿತ್ತಿದ ನಂತರ ಪೂರ್ವಾಷಾಢಾ ನಕ್ಷತ್ರದಲ್ಲಿ ಚಂದ್ರೋದಯದಲ್ಲಿ ಬಾವಿ, ಕೆರೆ ಮೊದಲಾದವುಗಳನ್ನು ತೆಗೆಯಬೇಕು. ಅದೇ ಪೂರ್ವಾ

ಷಾಢಾ ನಕ್ಷತ್ರ ಹಾಗೂ ಚಂದ್ರೋದಯದಲ್ಲಿ ಫಲಹಿಡಿಯುವ ಯಾವುದೇ ವೃಕ್ಷಾದಿಗಳು ಹಾಗೂ ಸಮಸ್ತ ಪೈರುಗಳಿಗೂ ನೀರನ್ನು ಸೇಚಿಸತಕ್ಕದ್ದು. ಆ ಪೈರಿನ ರಕ್ಷಣೆಗೋಸ್ಕರ ಧನುರ್ಲಗ್ನ ಅಥವಾ ಸಿಂಹ ಲಗ್ನ ಮಾಘಾ ನಕ್ಷತ್ರದ ತುದಿಭಾಗ ಜ್ಯೇಷ್ಠಾನಕ್ಷತ್ರದ ಆದಿಭಾಗ ಉತ್ತರಾಭದ್ರಾನಕ್ಷತ್ರದ ಮಧ್ಯಬಾಗಗಳಲ್ಲಿ ಕಂಟಿ (ಕಾವಲು ಗೃಹ)ಯನ್ನು ನಿರ್ಮಿಸುವದು.

**ಆಕೃತ್ಯದ್ರಿಜನಾಚಲಾಯನಸವಿನ್ಮೂರ್ಧಾಮನುಭ್ಯಃ ಪರಸ್ಯಾಂ ನಾ-**
**ಡ್ಯಾಂ ಪ್ರಥಮಾದಿಸಿಂಹಕರಣಾನ್ಯುದ್ಯಂತಿ ದಿಕ್ಷು ಕ್ರಮಾತ್ ॥**
**ತಸ್ಯೈವಾಭ್ಯುದಯೇ ಚ ತದ್ದಿಶಿ ತಥಾ ವಿಷ್ಟೇಶ್ವ ಸಿಂಹೇಶ್ವಿಭೇ ಸಸ್ಯೇ**
**ಸನ್ನಿಹಿತಾ ಮೃಗಾದಿಜನಿತಾಂ ಬಾಧಾಂ ಹರಂತಿ ದ್ರುಮಾಃ ॥ ॥೭॥**

**ಟಿ:** ಮೃಗಾದಿಬಾಧಾನಿವಾರಣೆಯು (ಬೆಚ್ಚು)ಯನ್ನು ಪ್ರಾರಂಭಿಸುವದು. ಶುಕ್ಲ ಪ್ರತಿಪದ ಪರಾರ್ಧ ಮೊದಲುಗೊಂಡು ಬವಕರಣಗಳು ಮಾಸದಲ್ಲಿ ಎಂಟಾವರ್ತಿ ಸಂಚರಿಸುವದು, ಪೂರ್ವದಿಕ್ಕಿನಲ್ಲಿ ಪ್ರಥಮ ಬವಕರಣವು ೨೩ನೇ ಘಟಿಯಲ್ಲಿಯೂ ಆಗ್ನೇಯ ದಿಕ್ಕಿನಲ್ಲಿ ೨ನೇ ಬವಕರಣವು ಎಂಟನೇ ಘಟಿಯಲ್ಲೂ ದಕ್ಷಿಣ ದಿಕ್ಕಿನಲ್ಲಿ ೩ನೇ ಬವಕರಣವು ೨೫ನೇ ಘಟಿಯಲ್ಲಿಯೂ ನೈರುತ್ಯದಿಕ್ಕಿನಲ್ಲಿ ೪ನೇ ಬವಕರಣವು ಎಂಟನೇ ಘಟಿಯಲ್ಲಿಯೂ ಪಶ್ಚಿಮ ದಿಕ್ಕಿನಲ್ಲಿ ೫ನೇ ಬವಕರಣವು ೩ನೇ ಘಟಿಯಲ್ಲಿಯೂ ವಾಯುವ್ಯದಿಕ್ಕಿನಲ್ಲಿ ೬ನೇ ಬವಕರಣವು ೨೨ನೇ ಘಟಿಯಲ್ಲಿಯೂ ಉತ್ತರದಿಕ್ಕಿನಲ್ಲಿ ೭ನೆ ಬವಕರಣವು ೨೨ನೇ ಘಟಿಯಲ್ಲಿಯೂ ಉತ್ತರದಿಕ್ಕಿನಲ್ಲಿ ೭ನೇ ಬವಕರಣವು ೨೨ನೇ ಘಟಿಯಲ್ಲಿಯೂ ಈಶಾನ್ಯ ದಿಕ್ಕಿನಲ್ಲಿ ೮ನೇ ಬವಕರಣವು ೧೫ನೇ ಘಟಿಯಲ್ಲಿಯೂ ಉದಯಿಸುವದು. ಆಯಾಯ ದಿಕ್ಕಿನಲ್ಲಿ ಆ ಬವಕರಣದ ಉದಯಘಟಿಗಳನ್ನು ತಿಳಿದುಕೊಂಡು ಅವುಗಳಲ್ಲಿ ಆದರಂತೆ ಶುಕ್ಲೇ ಸಾಗರ ಇತ್ಯಾದಿ ದಶಾಧ್ಯಾಯೋಕ್ತವಾದ ವಿಷ್ಟ್ಯುದಯಘಟಿ ಆ ಧಿಕ್ಕಿನಲ್ಲಾಗಲೀ ಸಿಂಹ ಅಥವಾ ಧನುರ್ಲಗ್ನದಲ್ಲಿ ಮುಂದೆ ಹೇಳುವ ವೃಕ್ಷ ಶಾಖೆಗಳನ್ನು ಬೆಚ್ಚಿನ ಬಗ್ಗೆ ನೆಟ್ಟರೆ ಅದರಿಂದ ಮೃಗಾದಿ ಬಾಧೆಯು ದೂರಾಗುವದು.

**ಸ್ನುಹ್ಯೌದುಂಬರಬಿಲ್ವವಿಷ್ಟಿಬಕುಲಾನ್ಯೈಕಂಕತಾಖ್ಯಪ್ಲಕ್ಷಾರಂಭಾವೇಣು**

ರಿವೇಽಪಿ ಸಿಂಹತರವಃ ಸಸ್ಯೇಷು ಬಾಧಾಹರಾಃ ॥ ಅಶ್ವತ್ಥಶ್ಚ ತಥೈವ ಕಿಂಶುಕತರುರ್ವೇಣುಶ್ಚ ಕಾರಸ್ಕರಃ। ಸ್ನುಹ್ಯರ್ಕಂಕತಧಾತಕೀಸ್ನುಗ ಭಿಧಾಃ ಕರ್ಣೀ ಚ ವಿಷ್ಟಿದ್ರುಮಾಃ ॥ ॥೮॥

ಟೀ: ಪ್ರಥಮ ಬವಕರಣಕ್ಕೆ ಹಾಲು ಬರುವ ಮರ, ೨ನೇ ಬವಕರಣಕ್ಕೆ ಅತ್ತಿ, ೩ನೇ ಬವಕರಣಕ್ಕೆ ಬಿಲ್ವ, ೪ನೇ ಬವಕರಣಕ್ಕೆ ಪಿಷ್ಪಿ ಎಂಬ ವೃಕ್ಷವಿಶೇಷ, ೫ನೇ ಬವಕರಣಕ್ಕೆ ರಂಬಲು, ೬ನೇ ಬವಕರಣಕ್ಕೆ ಸ್ರುವಾ ವೃಕ್ಷ, ೭ನೇ ಬವಕರಣಕ್ಕೆ ಜಾಳೆ, ೮ನೇ ಬವಕರಣಕ್ಕೆ ಬಿದುರು ಇದರಂತೆ ಪ್ರಥಮ ವಿಷ್ಟಿಕರಣಕ್ಕೆ ಅಶ್ವತ್ಥ, ೨ನೇ ವಿಷ್ಟಿಗೆ ಮುತ್ತುಗಲು ೩ನೆ ವಿಷ್ಟಿಗೆ ಬಿದುರು, ೪ನೇ ವಿಷ್ಟಿಗೆ ಕಾಸರ್ಕ, ೫ನೇ ವಿಷ್ಟಿಗೆ ಸ್ರುವಾವೃಕ್ಷ, ೬ನೇ ವಿಷ್ಟಿಗೆ ಧಾತಕಿ, ೭ನೇ ವಿಷ್ಟಿಗೆ ಸ್ನುಹಿ, ೮ನೇ ವಿಷ್ಟಿಗೆ ಕರ್ಣಿಕಾರ ಹೀಗೆ ವಿಷ್ಟಿಯ ವೃಕ್ಷಗಳು ಆಯಾಯ ವೃಕ್ಷಗಳನ್ನು ಆಯಾಯ ಕರಣದ ಆಯಾಯ ದಿಕ್ಕಿನ ಆಯಾಯ ಘಟಿಗಳಲ್ಲಿ ಹುಗಿದರೆ ಮೃಗಬಾಧೆಯಾಗುವದಿಲ್ಲ.

ವಿಶ್ವೇಶಾಂತ್ಯಭಗಾನಿಲೇಂದ್ರವರುಣೇಷ್ವಂತ್ಯಾದ್ಯಪಾದೇ ಶುಭೇ ಲಗ್ನೇ ಚಾಳಿಕುಳೀರಯೋಃ ಶ್ರುತಿಮಘಾಶೂರ್ಪೇಷು ವಾ ಸತ್ತಿಥೌ ॥ ಕುರ್ಯಾತ್ಸದ್ದಿನಸೇಚ ಸಸ್ಯಲವನಂಚಾದ್ರಾಮಘಾಜಾಚ್ಯುತಬ್ರಧ್ನೇಷು ಸ್ಥಿರಭೇ ಗೃಹಂ ಪ್ರತಿ ನಯೋದ್ಧಾನ್ಯಂ ಚ ಮಂದೇಕ್ಷಿತೇ ॥ ॥೯॥

ಟೀ: ಉತ್ತ್ರಾಷಾಢ, ಆರ್ದ್ರಾ, ರೇವತಿ, ಉತ್ತ್ರಾ, ಸ್ವಾತೀ, ಜ್ಯೇಷ್ಠಾ, ಶತಭಿಷ, ನಕ್ಷತ್ರಗಳಲ್ಲಿ ಚತುರ್ಥ ಅಥವಾ ಆದ್ಯಪಾದದಲ್ಲಿ ಶುಭಲಗ್ನದಲ್ಲಿ ಶುಭತಿಥಿಯಲ್ಲಿ ಶುಭಗ್ರಹರ ವಾರದಲ್ಲಿ ಹಣ್ಣಾದ ಪೈರನ್ನು ಕೊಯ್ಯತಕ್ಕದ್ದು. ಶ್ರವಣ, ಮಘಾ, ವಿಶಾಖಾ, ನಕ್ಷತ್ರಗಳಲ್ಲಿ ವೃಶ್ಚಿಕ, ಕರ್ಕಲಗ್ನದಲ್ಲಿ ಆರ್ದ್ರಾ, ಮಘಾ, ರೋಹಿಣಿ, ಶ್ರವಣ, ಹಸ್ತಾ, ಇವುಗಳಲ್ಲಿ ಶನಿದೃಷ್ಟಿ ಯುತವಾದ ಸ್ಥಿರ ಲಗ್ನದಲ್ಲಿ ಕೊಯ್ದ ಧಾನ್ಯಾದಿಗಳನ್ನು ಮನೆಗೆ ತರತಕ್ಕದ್ದು.

ದಸ್ರಾಂತ್ಯಾಂಶಗತೇ ವಿಧೌ ಸತಿ ತನೌ ಧಾನ್ಯಾಲಯಂ ಪೂರಯೇತ್ ಧಾನ್ಯೈರೇವತಥೋದಯೇ ಚ ಶಶಭೃದ್ಭ್ರುಗ್ವೋಃ ಕುಸೂಲಾದಿಕಂ ॥

ತಸ್ಮಾಚ್ಛನ್ಯದ ಸೋ ಶನೈಶ್ಚರದಿನೇ ಧಾನ್ಯಾನಿ ತಾನ್ಯುದ್ಧರೇದ್ವ್ಯೋಗೇ
ಸಿದ್ಧಸುಧಾಹ್ವಯೋ ಸುದಿವಸೇ ಕುರ್ಯಾತ್ತತಸ್ತಂಡುಲಾನ್ ॥ ॥೧೦॥

**ಟಿ:** ಅಶ್ವಿನೀ ನಾಲ್ಕನೇ ಪಾದದಲ್ಲಿರುವ ಚಂದ್ರನು ಲಗ್ನದಲ್ಲಿರುತ್ತಿರಲು ಚಾನ್ಯಗಳಿಂದಲೇ ಧಾನ್ಯವನ್ನು ತುಂಬುವ ಕೊಠಡಿಯನ್ನು ತುಂಬತಕ್ಕದ್ದು. ಧನಂದ್ರ ಶುಕ್ರರು ಲಗ್ನದಲ್ಲಿರುವಾಗ ಕಣಜದಲ್ಲಿ ಧಾನ್ಯವನ್ನು ತುಂಬತಕ್ಕದ್ದು ಶನಿವಾರದಲ್ಲಿ ಲಗ್ನದಲ್ಲಿ ಆ ಧಾನ್ಯ ಕೋಠಾರದಿಂಷ ಧಾನ್ಯವನ್ನು ತೆಗೆಯುವದು. ಹಿಂದೆ ಹೇಳಿದ ಸಿದ್ಧಸುಧಾಯೋಗದಲ್ಲಿ ಛತ್ರದಿಂದ ಅಕ್ಕಿಯನ್ನು ಮಾಡತಕ್ಕದ್ದು.

ಅತ್ಯಾಜ್ಯೇ ಭಗಣೇಹ್ನಿ ಭೌಮರಹಿತೇ ವಾರೇಳಿಹೀನೇ ಗೃಹೇನಿಂದೌ
ಮಂತ್ರಿಣಿ ವಾಂಬರೇ ಶರದೃತೌ ಸದ್ಯೋಗತಿಥ್ಯೋರ್ಗ್ರಹೇ ॥ ಕೃತ್ವಾ
ಗ್ರಾಯಣಕರ್ಮ ನವ್ಯಮಶನಂ ಸಂಪ್ರಾಶಯೇತ್ಸದ್ದಿನೇ ಸರ್ವೇಷ್ವೇಪ
ಕೃಷಿಕ್ರಿಯಾವಿಸಮಯಃ ಸಂಕೀರ್ತಿತೋತ್ರ ಕ್ರಮಾತ್ ॥ ॥೧೧॥

**ಟಿ:** ತ್ಯಾಜ್ಯಗಳಲ್ಲದ ನಕ್ಷತ್ರಗಳಲ್ಲಿ ಅಂಗಾರಕರಹಿತವಾದ ವಾರಗಳಲ್ಲಿ ವೃಶ್ಚಿಕ ರಹಿತವಾದ ಚಂದ್ರ ರಹಿತವಾದ ಲಗ್ನಗಳಲ್ಲಿ ಗುರುವು (ವಿಕಲ್ಪದಿಂದ) ವಿಶಮದಲ್ಲಿರುವಾಗ (ದಶಮಶುದ್ಧಿಯಿರುವಾಗ) ಶರದೃತುವಿನಲ್ಲಿ ತ್ಯಾಜ್ಯಗಳಲ್ಲದ ಯೋಗತಿಥಿಗಳಲ್ಲಿ ಆಗ್ರಾಯಣ (ಸ್ಥಾಲಿಪಾಕ)ವನ್ನು ಮಾಡಿ ಅನ್ನವನ್ನು ಉಣ್ಣತಕ್ಕದ್ದು.



# ॥ ಪ್ರಕೀರ್ಣಾಧ್ಯಾಯಃ ॥

ಸೌಮ್ಯೇ ವಾ ಘಟಿವರ್ಜಿತೇ ಶುಭದಿನೇ ರಾಶೌ ಚರೇ ನೇಷ್ಟತೋ
ಶುದ್ಧೇಽಸ್ತೇಽಂತ್ಯಗೃಹೇ ಭೃಗೌ ಚ ಹಿಮಗೌ ದೇವಪ್ರತಿಷ್ಠಾ ಶುಭಾ ॥
ತಸ್ಯಾಮಂತ್ಯಕರೋತ್ತರಾದಿತಿಮರುತ್ತಿಷ್ಯಪ್ರಜೇಶಾಃ ಶುಭಾಃ ಕರ್ತ್ರುರ್
ಗ್ರಾಮಪತೇರ್ನೃಪಸ್ಯ ಚ ಪರಿತ್ಯಾಜ್ಯೌ ವ್ಯಯಾಯುರ್ಗೃಹೌ ॥೧॥

ಟೀ: ದೇವಪ್ರತಿಷ್ಠಾ-ಕುಂಭರಹಿತವಾದ, ಶುಭದಿನದಲ್ಲಿ ಚರವರ್ಜಗಳಾದ ರಾಶಿ ಅಂದರೆ ಸ್ಥಿರ ಉಭಯ ರಾಶಿಗಳಲ್ಲಿ ಲಗ್ನದಿಂದ ಅಷ್ಟಮವು ಶುದ್ಧವಿರುವಾಗ ಶುಕ್ರ ಚಂದ್ರರು ವ್ಯಯರಹಿತವಾದ ಬೇರೆ ಸ್ಥಾನದಲ್ಲಿ ದೇವಪ್ರತಿಷ್ಠೆಯು ಶುಭತರವಾದದ್ದು. ಆ ದೇವಪ್ರತಿಷ್ಠೆಯಲ್ಲಿ ರೇವತೀ, ಹಸ್ತಾ, ಉತ್ತ್ರಾ, ಉತ್ತ್ರಾಷಾಢ, ಉತ್ತ್ರಾಭದ್ರ, ಪುನರ್ವಸು, ಸ್ವಾತಿ, ತಿಷ್ಯ ರೋಹಿಣಿ ನಕ್ಷತ್ರಗಳು ಶುಭಗಳಾಗುವವು. ಯಜಮಾನ, ಗ್ರಾಮಾಧಿಪತಿ ರಾಜ ಇವರೆಲ್ಲರ ಜನ್ಮರಾಶಿಯಿಂದ ವ್ಯಯ, ಅಷ್ಟಮರಾಶಿಗಳು ತ್ಯಾಜ್ಯಗಳು.

ಕನ್ಯಾಕರ್ಕಿಘಟೋನವಾಪ್ಯಜಗುರು ಶ್ರೀಶೇಂದು ಮಿತ್ರೋತ್ತರಾ
ಶಕ್ರಾಂತ್ಯಶ್ವಿಕರೇಷು ಕೌಲಕರಣೇ ಚೇಂದ್ವರ್ಕಯುಕ್ ಸದ್ದಿನೇ ॥
ಕುಂಭೋನೇ ಮಿಥುನಾನ್ವಿತೇ ಸ್ಥಿರಗೃಹೇ ರಾಜ್ಞೋಽಭಿಷೇಕಃ ಶುಭಃ
ಪ್ರೋಕ್ತೋ ಭುಕ್ತಿವಧಾಯುಧಾದಿ ಭರಣೇ ಕಾಲೋಪಿಕಾಯೇಽ
ಖಿಲೇ ॥ ॥೨॥

ಟೀ: ರಾಜಾಭಿಷೇಕ ಕನ್ಯಾ ಕರ್ಕ ಕುಂಭರಹಿತವಾದ ಸೌರಮಾಸದಲ್ಲಿ ರೋಹಿಣಿ, ತಿಷ್ಯ, ಶ್ರವಣ, ಮೃಗಶೀರ್ಷ, ಅನುರಾಧಾ, ಉತ್ತ್ರಾ, ಉತ್ತ್ರಾಷಾಢ, ಉತ್ತ್ರಾಭದ್ರಾ, ಜ್ಯೇಷ್ಠಾ, ರೇವತಿ, ಅಶ್ವಿನಿ, ಹಸ್ತ, ನಕ್ಷತ್ರಗಳಲ್ಲಿ ಕೌಲವಕರಣದಲ್ಲಿ ಚಂದ್ರ ರವಿವಾರ ಹಾಗೂ ಶುಭವಾರ ಕುಂಭರಹಿತವಾದ ಮಿಥುನಯುಕ್ತವಾದ ಸ್ಥಿರ ರಾಶಿಯಲ್ಲಿ ರಾಜನ ಪಟ್ಟಾಭಿಷೇಕವು ಶುಭವು ಆಯುಧಾದಿಗಳ ಸಂಗ್ರಹದಲ್ಲಿ ಎಲ್ಲಾ ರಾಜ್ಯ ಕಾರ್ಯದಲ್ಲೂ ನವಾನ್ನಪ್ರಾಶನದಂತೆ ಮುಹೂರ್ತವನ್ನು ತಿಳಿಯತಕ್ಕದ್ದು.

ತಾರೇ ತ್ಯಾಜ್ಯಗಣೋನಿತೇ ಶುಭದಿನೇ ಮೂರ್ಧೋದಯೇವಾ ಚರೇ
ರಾಶೌ ಜನ್ಮದಿಗೀಶಯೋಶ್ಚ ಬಲಿನೋಯಾತ್ರಾ ನೃಪಾದೇಃ ಶುಭಾ ॥
ಮೀನೇ ಕರ್ಕಿಣಿ ವಾ ಗೃಹೇ ಮೃದುಚರಕ್ಷಿಪ್ರೇಷು ಭೇಷೂತ್ತಮಾ
ನೌಯಾತ್ರಾ ಬುಧಭಾರ್ಗವೋಜ್ಝಿತ ದಿನೇ ಯಾತ್ರಾ ಪರಾ
ಗೋಸ್ತ್ರೀಯೋಃ ॥ ॥೩॥

ಟಿ: ತ್ಯಾಜ್ಯಗಣ ರಹಿತವಾದ ನಕ್ಷತ್ರಗಳಲ್ಲಿ ಶುಭವಾರಾದಿ ದಿವಸಗಳಲ್ಲಿ ಜನ್ಮರಾಶಾಧಿಪತಿ, ಪ್ರಯಾಣ ದಿಕ್ಕಿನ ಅಧಿಪತಿಗಳು ಬಲಿಷ್ಠರಾಗಿರುವಾಗ ಮೂರ್ಧೋದಯ ಚರರಾಶಿಯಲ್ಲಿ ಅಥವಾ ಕೇವಲ ಚರರಾಶಿಯಲ್ಲಿ ರಾಜರು ಮೊದಲಾದವರ ಯಾತ್ರೆ (ಸ್ಥಾನಾಂತರ ಪ್ರಯಾಣ) ಯು ಶುಭವಾದದ್ದು. ಮೀನ ಅಥವಾ ಕರ್ಕ ಲಗ್ನದಲ್ಲಿ ಮೃದು ಚರ ಕ್ಷಿಪ್ರಸಂಜ್ಞಕಗಳಾದ ನಕ್ಷತ್ರಗಳಲ್ಲಿ ಜಲ ನೌಕಾ ಪ್ರಯಾಣವು ಉತ್ತಮವಾದದ್ದು. ಬುಧ ಶುಕ್ರರಹಿತವಾದ ವಾರದಲ್ಲಿ ಗೋವುಗಳ ಹಾಗೂ ಸ್ತ್ರೀಯರ ಪ್ರಯಾಣವು (ಉಕ್ತಶುಭದಿವಸದಲ್ಲಿ ) ಶುಭವು.

ದಿಕ್ಸ್ವಾಗ್ನ್ಯಾದಿಭಸಪ್ತಕಾನಿ ನಿಹಿತಾನ್ಯತ್ರಾಗ್ನಿವಾಯವ್ಯಗಾಂ ರೇಖಾಂ
ವಾಮಪುರಃಸ್ಥಿತಂ ಭೃಗುಸುತಂ ಚಾರ್ಕಾದಿವಾರಕ್ರಮಾತ್ ॥ ಕ್ಷ್ಮಾಷ್ಟ
ದ್ರಿದ್ವ್ಯಬ್ಧಿಗುಣಾಶಂಗಾಂಗಮಿತದಿಕ್ ಸಂಸ್ಥಾಂ ಕಥಾ ಯೋಗಿನೀಂ
ಚಾನುಲ್ಲಂಘ್ಯ ಸಮುಜ್ಝ್ಯ ದಿಕ್ ಯತಿಪರಾನ್ ಯಾಯಾನ್ನಿಮಿತ್ತೈಃ
ಶುಭೈಃ ॥ ॥೪॥

ಟಿ: ಪೂರ್ವದಿಕ್ಕಿನಲ್ಲಿ ಕೃತ್ತಿಕಾದಿ ೭ ದಕ್ಷಿಣ ದಿಕ್ಕಿನಲ್ಲಿ ಮಘಾದಿ ೭ನಕ್ಷತ್ರ ಪಶ್ಚಿಮ ದಿಕ್ಕಿನಲ್ಲಿ ಅನುರಾಧಾದಿ ಅಭಿಜಿತ್ ಯುಕ್ತಗಳಾದ ೭ನಕ್ಷತ್ರಗಳು ಉತ್ತರ ದಿಕ್ಕಿನಲ್ಲಿ ದನಿಷ್ಠಾದಿ ೭ನಕ್ಷತ್ರಗಳು ಹೀಗೆ ಚತುರಸ್ರಾಕಾರವಾದ ನಕ್ಷತ್ರ ಚಕ್ರವನ್ನು ರಚಿಸತಕ್ಕದ್ದು. ಇದರಲ್ಲಿ ಆಗ್ನೇಯದಿಂದ ವಾಯುವ್ಯದವರೆಗೆ ಒಂದು ಕರ್ಣರೇಖೆಯನ್ನು ತೆಗೆಯತಕ್ಕದ್ದು ಆ ಕರ್ಣರೇಖೆ (ಪರಿಘ) ಯನ್ನು ದಾಟದೇ ಪೂರ್ವದಿಕ್ಕಿನ ನಕ್ಷತ್ರಗಳಿಂದ ಪೂರ್ವದಿಕ್ಕು ಅಥವಾ ಉತ್ತರದಿಕ್ಕನ್ನು ಉತ್ತರ ದಿಕ್ಕಿನ ನಕ್ಷತ್ರಗಳಿಂದ ಉತ್ತರ ಹಾಗೂ

ಪೂರ್ವ ದಿಕ್ಕನ್ನು ದಕ್ಷಿಣ ದಿಕ್ಕಿನ ನಕ್ಷತ್ರಗಳಿಂದ ದಕ್ಷಿಣ ಅಥವಾ ಪಶ್ಚಿಮ ದಿಕ್ಕನ್ನು ಪಶ್ಚಿಮ ದಿಕ್ಕಿನ ಪಶ್ಚಿಮ ಅಥವಾ ದಕ್ಷಿಣ ದಿಕ್ಕನ್ನು ಕುರಿತು ಹೋಗುವದು ಶುಭಕರವು. ಪ್ರಯಾಣಿಕನ ಎಡ ಅಥವಾ ಮುಂಗಡೆಯಲ್ಲಿ ಪೂರ್ವೋಕ್ತವಾದ ನಕ್ಷತ್ರ ದಿಕ್ಕಿನಲ್ಲಿ ಇರುವ ಶುಕ್ರನನ್ನು ದಾಟದೇ ಅಂದರೆ ಶುಕ್ರನಿರುವ ನಕ್ಷತ್ರವು ಯಾವ ದಿಕ್ಕಿಗಿರುವದೋ ಆ ದಿಕ್ಕನ್ನು ಎಡಕ್ಕೆ ಅಥವಾ ಮುಂಗಡೆಯಲ್ಲಿ ಮಾಡಿಕೊಂಡು ಹೋಗಬಾರದೆಂದರ್ಥವು. ರವ್ಯಾದಿವಾರ ಕ್ರಮದಿಂದ ಪೂರ್ವ, ಉತ್ತರ, ಆಗ್ನೇಯ, ನೈರುತ್ಯ, ದಕ್ಷಿಣ, ಪಶ್ಚಿಮ, ವಾಯುವ್ಯ ದಿಕ್ಕನ್ನು ಹೊಂದಿರುವ "ಯೋಗಿನಿ" ಯನ್ನು ಉಲ್ಲಂಗಿಸದೇ ಅಂದರೆ ರವ್ಯಾದಿ ವಾರಗಳಲ್ಲಿ ಪೂರ್ವಾದಿ ದಿಕ್ಕನ್ನು ಕುರಿತು ಹೋಗಬಾರದೆಂಬಭಿಪ್ರಾಯ ದಿಕ್ಪತಿಗ್ರಹಗಳನ್ನು ಪೂಜಿಸಿ ಶುಭ ನಿಮಿತ್ತಗಳುಂಟಾದಾಗ ಪ್ರಯಾಣ ಮಾಡತಕ್ಕದ್ದು.

ವಿಶ್ವಾಚಾರ್ಯಮಘಾಚತುಷ್ಕಭರಣೀವಾಯುವ್ಯಬುದ್ಧ್ಯಾದಿತಿ ಜ್ಯೇ
ಷ್ಠಾಶೂರ್ಪಯುಗಾಂತ್ಯಧಾತೃವಸವಃತಾರಾಃ ಶುಭಾ ವಾಸರಾಃ ॥
ಅಚ್ಛಿದ್ರಾಸ್ತಿಥಯೋ ಗೃಹಾ ಮೃಗಧನುರ್ಗೋಯುಗ್ಮಕನ್ಯಾಘಟಾಃ
ಸತ್ಯೇಟೋದಯಸಂಯುತಾಶ್ಚ ಶುಭದಾಃ ಸ್ತ್ರೀಣಾಂ ಸ್ಯುರಾದಾ
ರ್ತವೇ ॥ ॥೫॥

ಟೀ: ಸ್ತ್ರೀಯರ ಮೊದಲನೇ ಋತುಶುಸ್ರಾವದಲ್ಲಿ ಉತ್ತರಾಷಾಢ, ತಿಷ್ಯ ಮಘಾ ಪುಬ್ಬಾ, ಉತ್ತರಾ, ಹಸ್ತಾ, ಭರಣಿ, ಸ್ವಾತೀ, ಉತ್ತರಾಭದ್ರ, ಪುನರ್ವಸು, ಜ್ಯೇಷ್ಠೆ ವಿಶಾಖಾ, ಅನುರಾಧಾ, ರೇವತಿ, ರೋಹಿಣಿ, ಧನಿಷ್ಠಾ ನಕ್ಷತ್ರಗಳು ಶುಭವಾರಗಳು ಛಿದ್ರಾಗಹಿತ ತಿಥಿಗಳೂ ಶುಭಗ್ರಹಯುಕ್ತವಾದ ಮಕರ, ಧನು, ವೃಷಭ, ಮಿಥುನ, ಕನ್ಯಾ ಕುಂಭರಾಶಿಗಳೂ ಶುಭಗಳು.

ತೈಲಾಭ್ಯಂಗನುಪೇಂದುವಿಚ್ಛನಿದಿನೇ ಕುಯರ್ಾದಪುಣ್ಯೇ ತಿಥೌ
ಸತ್ತಾರೇಷ್ವಹರೀಂದೇವಾರುಣಮಘಾಮೂಲೇಷು ವಾಸೋ ನವಂ ॥
ಬಿಭ್ರೀತಾಭರಣಂ ವಿಧೌ ದ್ರುಹಿಣಭೇ ಲಗ್ನೇ ಗುರೋರ್ವೋದಯೇ
ಕುಯರ್ಾತ್ಸ್ವಿಮುಖಾವಲೋಕನಮಹನ್ಯಾರಸ್ಯ ತಾರೇ ಶುಭೇ ॥
॥೬॥

**ಟಿ:** ತೈಲಾಭ್ಯಂಗವನ್ನು ಪರ್ವ ಸಂಕ್ರಾಂತಿ, ವ್ಯತಿಪಾತ, ವೈಧೃತ, ಶ್ರಾದ್ಧ ಮೊದಲಾದ ಪುಣ್ಯದಿನಗಳನ್ನು ಬಿಟ್ಟು ಚಂದ್ರ, ಬುಧ, ಶನಿವಾರಗಳಲ್ಲಿ ಮಾಡತಕ್ಕದ್ದು. ಶ್ರವಣ, ಮೃಗಶೀರ್ಷ, ಶತಭಿಷ, ಮಘಾ, ಮೂಲ, ರಹಿತಗಳಾದ ಶುಭನಕ್ಷತ್ರಗಳಲ್ಲಿ ಹೊಸವಸ್ತ್ರವನ್ನು ಧರಿಸತಕ್ಕದ್ದು. ರೋಹಿಣಿ ನಕ್ಷತ್ರದಲ್ಲಿ ಚಂದ್ರ ಅಥವಾ ಗುರುಯುಕ್ತ ಲಗ್ನದಲ್ಲಿಯಾಗಲೀ "ನೂತನಾಭರಣ"ವನ್ನು ಧರಿಸತಕ್ಕದ್ದು. ಶುಭ ನಕ್ಷತ್ರ ಕುಜವಾರದಲ್ಲಿ ರಾಜದರ್ಶನ (ಅಧಿಕಾರಿಗಳ ಭೆಟ್ಟಿ)ಯನ್ನು ಮಾಡತಕ್ಕದ್ದು.

**ಸ್ವಾತೀಸಾರ್ದ್ರಯುತೇ ಶನೈಶ್ಚರದಿನೇ ಗೋಷ್ಠಂ ವೃಷಾರ್ಕೋದಯೇ**
**ಬಧ್ನೀಯಾದ್ಗುರುಮಂದವಾರ ಸಹಿತೇ ತಾರೇ ಗೃಹೇ ಚ ಸ್ಥಿರೇ ॥**
**ಕುರ್ಯಾತ್ಸಂಗ್ರಹಣಂ ಗವಾಮಜಮಹಿಷ್ಯಶ್ವೈಣಮಾತಂಗಗೋ-**
**ಯೋನ್ಯೃಕ್ಷೇಷ್ವಸಿತಾರ್ಕವಿದ್ಗುರುದಿನೇಷ್ವಂತ್ಯೋಕ್ಷಕುಂಭೇಷು ಚ॥**
**॥೭॥**

**ಟಿ:** ಸ್ವಾತಿ, ಆರ್ದ್ರಾ, ನಕ್ಷತ್ರಸಹಿತವಾದ ಶನಿವಾರದಲ್ಲಿ ವೃಷಭಮಾಸ ವೃಷಭಲಗ್ನದಲ್ಲಿ ಅಥವಾ ಗುರು ಅಥವಾ ಶನಿವಾರಯುಕ್ತವಾದ ಸ್ಥಿರ ನಕ್ಷತ್ರ ಸ್ಥಿರರಾಶಿಲಗ್ನದಲ್ಲಿ ದನದ ಕೊಟ್ಟಿಗೆಯನ್ನು ಕಟ್ಟತಕ್ಕದ್ದು. ಆಡು, ಮಹಿಷ ಅಶ್ವ ಮೃಗ ಆನೆ ಗೋವು ಯೋನಿನಕ್ಷತ್ರ ಅರ್ಥಾತ್ ತಿಷ್ಯ ಹಸ್ತ, ಸ್ವಾತೀ, ಶತಭಿಷ, ಅಶ್ವಿನಿ ಅನುರಾಧಾ, ರೇವತಿ, ಉತ್ತರಾತ್ರಯ ಗಳಲ್ಲಿ ಮೀನ, ವೃಷಭ, ಕುಂಭಲಗ್ನಗಳಲ್ಲಿ ಶನಿ, ರವಿ, ಬುಧ, ಗುರು ವಾರಗಳಲ್ಲಿ ಗೋವುಗಳ ಸಂಗ್ರಹ ಮಾಡತಕ್ಕದ್ದು.

**ಷಟ್ತ್ರ್ಯೇಕಾದಶಕರ್ಮಗೋದಿನಕರಃ ಷಟ್ತ್ರ್ಯಾಯಗೋ ಭೂಮಿಜಃ**
**ಸೌರಿಶ್ಚಾಸ್ತಸುತಾಯಧರ್ಮಧನಗೋ ಜೀವಃ ಪ್ರದದ್ಯಾಚ್ಛುಭಂ ॥**
**ಜನ್ಮದ್ವಾದಶಮೃತ್ಯುಗಾ ರವಿಗುರುಕ್ಷ್ಮಾಪುತ್ರಮಂದೋರಗಾ ರೋ-**
**ಗಾನರ್ಥಹತಿಂ ಚ ವಾ ಮೃತಿಭಯಂ ಕುರ್ಯುರ್ಗ್ರಹಾ ಗೋಚರೇ॥**
**॥೮॥**

**ಟಿ:** ಗೋಚರ ಗ್ರಹಫಲ ಗೋಚರದಲ್ಲಿ ಜನ್ಮರಾಶಿಯಿಂದ ಷಷ್ಠತೃತೀಯ ಏಕಾದಶ ದಶಮಗಳಲ್ಲಿ ಸೂರ್ಯನೂ, ಷಷ್ಠತೃತೀಯ ಏಕಾದಶಗಳಲ್ಲಿ

ಕುಜ, ಶನಿ, ರಾಹು ಕೇತುಗಳೂ ಸಪ್ತಮ ಪಂಚಮ ಏಕಾದಶ ನವಮ ದ್ವಿತೀಯದಲ್ಲಿ ಗುರುವೂ ಶುಭಫಲ ಕೊಡುವರು. ಪ್ರಥಮ ದ್ವಾದಶ ಅಷ್ಟಮ ಸ್ಥಾನಗಳನ್ನು ಹೊಂದಿರುವ ರವಿ. ಗುರು. ಕುಜ, ಶನಿ. ರಾಹು ಕೇತುಗಳು ರೋಗ ಧನಹಾನಿ ಮರಣಭೀತಿ ಇತ್ಯಾದಿ ಫಲಗಳನ್ನು ಕೊಡುವರು.

**ಅಚ್ಛಿದ್ರಾತಿಥಿಭಿಸ್ತ್ವಸುಧ್ವಯಮರುದ್ಧೀನ್ಯೈಶ್ಚ ತಾರೈಃ ಶುಭೈಃ ಯುಕ್ತೇ ಸದ್ದಿವಸೇಚ ಜೀವತಿ ನರೋ ಜಾತಜ್ವರಾಧ್ಯಾಮಯಃ॥ ಜೀವಾರಾರ್ಕ ದಿನೇ ಚರೋಡುನಿಪಿಬೇದ್ವ್ಯಾಧೇಃ ಶಮಾಯೌಷಧಂ ವಾತಾದ್ಯಾಜ ವಿಧೂತ್ತರಾಸ್ವವಸಿತೌ ಸ್ನಾಯಾಚ್ಛುಭೇ ವಾಸರೇ ॥ ॥೯॥**

**ಟಿ:** ಛಿದ್ರಾರಹಿತವಾದ ತಿಥಿ, ಧನಿಷ್ಠಾ, ಶತಭಿಷ. ಸ್ವಾತೀ, ರಹಿತಗಳಾದ ನಕ್ಷತ್ರಗಳಲ್ಲಿ ಅಂದರೆ ಶುಭನಕ್ಷತ್ರಗಳಲ್ಲಿ ಶುಭವ ರದಲ್ಲಿ ಜ್ವರಾದಿಗಳುಂಟಾ ದಲ್ಲಿ ಆ ಮನುಷ್ಯನು ರೋಗಮುಕ್ತನಾಗುತ್ತಾನೆ. ಉತ್ತರಾತ್ರಯ ರೋಹಿಣಿ ನಕ್ಷತ್ರಗಳಲ್ಲಿ ವ್ಯಾಧಿಶಮನಕ್ಕಾಗಿ ಔಷಧಿಯನ್ನು ಕುಡಿಯತಕ್ಕದ್ದು. ರೋಗಾವಸಾನದಲ್ಲಿ ಸ್ವಾತೀ, ಅಶ್ವಿನಿ, ರೋಹಿಣಿ, ಮೃಗಶೀರ್ಷ, ಪುಷ್ಯ ಉತ್ತರಾತ್ರಯಗಳಲ್ಲಿ ಶುಭವಾರದಲ್ಲಿ ಸ್ನಾನ ಮಾಡತಕ್ಕದ್ದು.

**ಕನ್ಯಾಮಾಸಿ ಮಘಾಯಮಾಶ್ವಿಶಶಭೃತ್ಪೂರ್ವಾನುರಾಧಾಮರುಚ್ಚಿತ್ರಾಂತ್ಯಾರ್ಕಹರಿತ್ರಯೇಶಗುರುಭೇಷ್ವೈಂದ್ರೇಪಿವಾ ತಾರಕೇ॥ ನಂದೇದ್ರೋನತಿಥೌ ಸಿತ್ಮರರಹಿತೇ ವಾರೇ ಗೃಹೀ ಚಾತ್ಮನೋ ಜನ್ಮರ್ಕ್ಷತ್ರಿತಯಂ ಚ ದಾರಸುತಯೋರ್ಹಿತ್ವಾಷ್ಟಕಾಂ ಕಾರಯೇತ್ ॥ ॥೧೦॥**

**ಟಿ:** ಕನ್ಯಾಮಾಸದಲ್ಲಿ ಮಘಾ, ಭರಣೀ, ಅಶ್ವಿನೀ, ಮೃಗಶಿರ, ಪೂರ್ವಾತ್ರಯ ಅನುರಾಧಾ, ಸ್ವಾತೀ, ಚಿತ್ರಾ, ರೇವತಿ, ಹಸ್ತ, ಶ್ರವಣ, ಧನಿಷ್ಠಾ ಶತಭಿಷೆ, ಆದ್ರಾ, ತಿಷ್ಯ ನಕ್ಷತ್ರಗಳಲ್ಲಿ ಪ್ರತಿಪತ್ ಷಷ್ಟೀ ಏಕಾದಶೀ ಚತುರ್ದಶಿ ರಹಿತವಾದ ವಾರದಲ್ಲಿ ಗೃಹಸ್ಥನು ತನ್ನ ಹೆಂಡತಿ ಹಿರೇ ಮಗ ಇವರ ೩ ಜನ್ಮನಕ್ಷತ್ರವನ್ನು ಬಿಟ್ಟು "ಅಷ್ಟಕಾ" ಶ್ರಾದ್ಧವನ್ನು ಮಾಡತಕ್ಕದ್ದು.

**ಪ್ರೇತಶ್ರಾದ್ಧಮಶುಕ್ರವಕ್ರದಿವಸೇ ನುಮೇಂಪ್ರಸರ್ಜ್ಯೇ ತಿಥೌ ಪುಷ್ಯಾ**

**ಶ್ವೀಂದ್ರಮಘಾಹರಿತ್ರ್ಯಯಮರುಚ್ಚಿತ್ರೇಂದುಮಿತ್ರಾರ್ಕಭೇ ॥ತ್ರೈಪ-
ಕ್ಷಾದಿ ಮೃತಾದ್ದ್ವಿಷಡ್ರವಿಮಿತೇ ಮಾಸೇ ಶಿವೈರ್ಧಾಷ್ಟ್ಯಹನ್ಯಾದಥಾ-
ತ್ರಾತ ಏವ ಪಂಚಸು ಮೃತಸ್ಯೇಷ್ಟೇಪಿ ವಾನ್ಸ್ಪೃತ್ರತ್ತವೇ॥ ॥೧೧॥**

**ಟಿ:** ಮೃತನ ಪ್ರೇತಸಂಬಂಧಿ ಶ್ರಾದ್ಧವನ್ನು ಶುಕ್ರ ಕುಜರಹಿತವಾದವಾರ ದಲ್ಲಿ ಪ್ರತಿಪತ್, ಷಷ್ಠೀ ಏಕಾದಶೀ ಚತುರ್ದಶೀರಹಿತವಾದ ತಿಥಿಯಲ್ಲಿ ತಿಷ್ಯ, ಅಶ್ವಿನೀ, ಜ್ಯೇಷ್ಠಾ, ಮಘಾ, ಶ್ರವಣ, ಧನಿಷ್ಠಾ, ಶತಭಿಷ, ಸ್ವಾತೀ ಚಿತ್ರಾ, ಮೃಗಶಿರ, ಅನುರಾಧಾ, ಹಸ್ತ, ನಕ್ಷತ್ರಗಳಲ್ಲಿ ಮಾಡತಕ್ಕದ್ದು. ತ್ರೈಪಾಕ್ಷಿಕ ಶ್ರಾದ್ಧವನ್ನು ಮೃತದಿನದಿಂದ ದ್ವಿತೀಯ ಮಾಸದ ೧೧ನೇ ದಿವಸ ಅಥವಾ ಅದರ ಮುಂದಿನ ೫ ದಿವಸಗಳಲ್ಲಿ ಊನಷಾಣ್ಮಾಸಿಕವನ್ನು ೬ನೇ ತಿಂಗಳ ೨೧ನೇ ದಿವಸದಲ್ಲಿ ಅಥವಾ ಮುಂದೆ ೫ದಿವಸಗಳೊಳಗೆ ಊನಾಬ್ದಿಕ ಶ್ರಾದ್ಧವನ್ನು ೧೨ನೇ ತಿಂಗಳ ೧೬ನೇ ದಿನ ಅಥವಾ ಮುಂದಿನ ೫ದಿನಗಳಲ್ಲಿ ಮಾಡತಕ್ಕದ್ದು. ಮತ್ತು ಆ ೫ ದಿನಗಳ ಪೈಕಿ ಉತ್ತಮ ದಿವಸದಲ್ಲಿ ಮಾಡತಕ್ಕದ್ದು.

**ಲೋಕಾಗ್ನ್ಯೃತ್ವಿಷುವಹ್ನಿಭೂಯುಗಚತುಃಷಡ್ವೇದದೃಗ್ದ್ವೀಷುಭೂ-
ಚಂದ್ರಾಬ್ಧ್ಯಬ್ಧಿಗುಣೇಶವಾರ್ಘ್ಯಹಿಗುಣೇಷ್ವಾಶಾಕ್ಷಿನೇತ್ರತ್ರಿಭ್ಯೈಃ ॥
ದೃಶ್ಯಂತೇಶ್ವಿಮುಖಾಃ ಕ್ರಮಾದಿಹ ಮಘಾಂತ್ಯಾರ್ಯಾಶ್ಚಮಧ್ಯೇಹ್ಯ
ತ್ವಾಷ್ಟ್ರಾದ್ರೇಂದ್ವಿನಶೂರ್ಪಷಟ್ಕವರುಣಾಯಮಾಸ್ಯಾ ಪರೇ ಸೌಮ್ಯಗಾಃ
॥೧೨॥**

**ಟಿ:** ನಕ್ಷತ್ರ ಸಂಖ್ಯೆ ಅಶ್ವಿನಿ, ತಾರಾಸಂಖ್ಯೆ ೩ ಭರಣೀ ೩ ಕೃತ್ತಿಕಾ ೬ ರೋಹಿಣಿ ೫ ಮೃಗಶಿರಾ ೩ ಆರ್ದ್ರಾ ೧ ಪುನರ್ವಸು ೪ ತಿಷ್ಯ ೪ ಆಶ್ಲೇಷಾ ೬. ಮಘಾ ೪, ಪುಬ್ಬಾ ೨, ಉತ್ತರಾ ೨, ಹಸ್ತ ೫. ಚಿತ್ರಾ ೧, ಸ್ವಾತೀ ೧, ವಿಶಾಖೆ ೪. ಅನುರಾಧಾ ೪. ಜ್ಯೇಷ್ಠಾ ೩ ಮೂಲಾ ೧೧. ಪೂರ್ವಾಷಾಢ ೪. ಉತ್ತರಾಷಾಢ ೮. ಶ್ರವಣ ೩ ಧನಿಷ್ಠಾ ೫ ಶತಭಿಷ ೧೦, ಪೂರ್ವಾಭಾದ್ರಾ ೨ ಉತ್ತರಾಭಾದ್ರಾ ೨. ರೇವತಿ ೩. ಹೀಗೆ ಆಕಾಶದಲ್ಲಿ ತೋರುತ್ತವೆ. ಆ ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಮಘಾ, ರೇವತಿ, ತಿಷ್ಯಗಳ ಯೋಗತಾರೆಗಳು ಕ್ರಾಂತಿ ವೃತ್ತದ ಮಧ್ಯದಲ್ಲೇ ತೋರುತ್ತವೆ. ಆಶ್ಲೇಷಾ, ರೋಹಿಣಿ, ಚಿತ್ರಾ, ಆರ್ದ್ರಾ, ಮೃಗಶೀರ್ಷ, ಹಸ್ತ ವಿಶಾಖಾದಿ ೬ ತಾರೆಗಳು ಶತಭಿಷ ಇವು

ಗಳ ಯೋಗತಾರೆಗಳೂ ಸಂಕ್ರಾಂತಿವೃತ್ತದ ಉತ್ತರಕ್ಕಿರುವವು.

**ವಿಂಶೋಬ್ಧ್ಯಕ್ಷ್ವಿವಿತೋಽಷ್ವತತ್ವನ್ಯತುಭಾನ್ಯ್ರಕ್ಷ್ಂವಮಹೀಭೃಧೃತಿವಾ**
**ಹಿತಿಭೂರ್ವಿದ್ಯಾತ್ರಿನೃಪೋತ್ಕೃತಿರ್ದಶಸವಿಂತ್ಸಾಬ್ಧಿರ್ನಖೋಪಾಂತಿಮಃ**
**ದಿಗ್ಭ್ಯಾಕ್ರಾ ವಿಕೃತಿಸ್ತ್ರಿದಿಗ್ಜಿನವಿಂತೋ ದಿಕ್ಸ್ವಾರವೇೂಷೋಂಶಕಃ। ಪ್ರೋ**
**ದೇತ್ಯಂಬರಮಧ್ಯಗೇಷು ಹರಿಭಾದ್ಯೈಕ್ಷ್ಯೇಷ್ವಜಾದೇಃ ಕ್ರಮಾತ್ ॥**
**॥೧೩॥**

ಟಿ: ನೆತ್ತಿಯ ಮೇಲೆ ಬಂದ ನಕ್ಷತ್ರಗಳಿಂದ ಕ್ಷತಿಜದಲ್ಲಿ ಉದಯವಾಗುವ ಲಗ್ನಗಳನ್ನು ಹೇಳುತ್ತಾನೆ. ಶ್ರವಣ ನಕ್ಷತ್ರವು ನಡುನೆತ್ತಿಯ ಮೇಲಿರುವಾಗ ಮೇಷರಾಶಿಯ ೨೦ನೇ ಭಾಗವೂ ಧನಿಷ್ಠೆಯು ಮಧ್ಯದಲ್ಲಿರುವಾಗ ಮಿಥುನದ ಎಂಟನೇ ಭಾಗವೂ; ಉತ್ತರಾಭದ್ರೆಯು ಇರುವಾಗ ಮಿಥುನದ ೭೪ನೇ ಅಂಶವೂ- ರೇವತಿಯು ಮಧ್ಯದಲ್ಲಿರುವಾಗ ಕರ್ಕದ ೬ನೇ ಅಂಶವೂ; ಅಶ್ವಿನಿಯಿರುವಾಗ ಅದೇ ೧೨ನೇ ಅಂಶವೂ; ಭರಣಿಯಿರುವಾಗ ಅದೇ ೨೭ ಅಂಶವೂ. ಕೃತ್ತಿಕೆಯಿರುವಾಗ ಸಿಂಹದ ೭ನೇ ಅಂಶವೂ ರೋಹಿಣಿಯಿರುವಾಗ ಅದೇ ೧೮ನೇ ಅಂಶವೂ, ಮೃಗಶಿರೆಯಿರುವಾಗ ಕನ್ಯಾರಾಶಿಯ ೧ನೇ ಭಾಗವೂ ಆರ್ದ್ರೆಯಿರುವಾಗ ೧೮ನೇ ಭಾಗವೂ, ಪುನರ್ವಸು ಇರುವಾಗ ತುಲೆಯ ೩ನೇ ಅಂಶವೂ ತಿಷ್ಯ ಇರುವಾಗ ಅದೇ ೧೬ನೇ ಅಂಶವೂ ಆಶ್ಲೇಷೆಯಿರುವಾಗ ವೃಶ್ಚಿಕದ ೧೦ನೇ ಭಾಗವು ಹುಬ್ಬೆಯಿರುವಾಗ ೨೧ನೇ ಭಾಗವು, ಉತ್ತರೆಯಿರುವಾಗ ಧನುವಿನ ೪ನೇ ಅಂಶವು, ಹಸ್ತವಿರುವಾಗ ೨೫ನೇ ಅಂಶವು, ಚಿತ್ರೆಯಿರುವಾಗ ೧೯ನೇ ಸ್ವಾತಿಯಿರುವಾಗ ಮಕರದ ೧೦ನೇ ಭಾಗವು, ವಿಶಾಖೆಯಿರುವಾಗ ಅದೇ ೨೫ನೇ ಅಂಶವೂ, ಅನುರಾಧೆಯಿರುವಾಗ ಕುಂಭದ ೩ನೇ ಭಾಗವು, ಜ್ಯೇಷ್ಠೆಯಿರುವಾಗ ಅದೇ ೧೦ನೇ ಭಾಗವು, ಮೂಲವಿರುವಾಗ ಅದೇ ೨೪ನೇ ಅಂಶವು, ಪೂರ್ವಾಷಾಢವಿರುವಾಗ ಮೀನದ ೧೦ನೇ ಭಾಗವು ಉತ್ತರಾಷಾಢ ನೆತ್ತಿಯಲ್ಲಿರುವಾಗ ಅದೇ ಮೀನದ ೨೦ನೇ ಅಂಶವು, ಪೂರ್ವತ್ರತ್ರಿ ನೆತ್ತಿಯಲ್ಲಿರುವಾಗ ಅದೇ ಮೀನದ ೭೭ನೇ ಅಂಶವು, ಪೂರ್ವತ್ರತಿಜ (ಲಗ್ನ)ನಲ್ಲಿ ಉದಯದಲ್ಲಿರುವವು.

**ಲಗ್ನಂ ವ್ಯೋಮಗತೋಡುಭಿರ್ನಿಶಿ ದಿವಾ ಛಾಯಾವದ್ಯೈಶ್ಚಸ್ಥಿತಿಂ
ಖೇಟಾನಾಂ ಚ ಶುಭಕ್ರಿಯಾಸು ವಿಹಿತಂ ಪಂಚಾಂಗಮುತ್ಕೃತ್ತಮಂ॥
ಜ್ಞಾತ್ವಾ ತತ್ರ ಹಿತೇ ಚ ದೋಷರಹಿತೇ ಕಾಲೇ ಮೌಹೂರ್ತಂ
ವದೇದ್ವಿದ್ವಾನೇವಮಿಹ ಪ್ರಕೀರ್ಣಸಮಯಃ ಸಂಕ್ಷೇಪತಃಕೀರ್ತಿತಃ
॥೧೪॥**

**ಟಿ:** ಮೂಹೂರ್ತತಜ್ಞನು ಆಯಾಯ ಕಾರ್ಯಗಳಲ್ಲಿ ಆಕಾಶದಲ್ಲಿರುವ ನಕ್ಷತ್ರಗಳ ಮೇಲಿಂದಲೂ ಹಗಲು ತನ್ನ ಛಾಯಾವದಗಳಿಂದಲೂ ತಿಳಿದು ಶುಭಾಶುಭ ಗ್ರಹರ ಅನುಕೂಲ ಸ್ಥಿತಿಯನ್ನೂ ಶುಭ ಕಾರ್ಯಗಳಲ್ಲಿ ಯುಕ್ತವಾದ ಉತ್ತಮವಾದ ತಿಥಿ ವಾರಾದಿ ಪಂಚಾಂಗವನ್ನು ತಿಳಿದು ಅದರಲ್ಲಿ ದೋಷರಹಿತವಾದ ಕಾಲದಲ್ಲಿ ಮುಹೂರ್ತವನ್ನು ಹೇಳತಕ್ಕದ್ದು. ಹೀಗೆ ಇಲ್ಲಿ (ಈ ಅಧ್ಯಾಯದಲ್ಲಿ) ದೇವ ಪ್ರತಿಷ್ಠಾದಿ ಬೇರೆಬೇರೆ ಉಪಯುಕ್ತಗಳಾದ ಮುಹೂರ್ತಗಳು ಇಲ್ಲಿ ಸಂಕ್ಷೇಪವಾಗಿ ಹೇಳಲ್ಪಟ್ಟವು.

ಇತ್ಥಂ ಸತ್ಪದಿ ನಿಮ್ನಸಂಜ್ಞಿತಪದೇ ವಾಸಿಷ್ಠಗೋತ್ರೋತ್ತಮೋ ಜಾತಃ ಸತ್ಪಥಿ ತತ್ಪರಃ ಸುಮತಿಮಾನ್ ವಿದ್ವದ್ವರಃ ಕೇಶವಃ ॥ ಹೃದ್ಯೈಃ ಪದ್ಯವರೈರ್ದಶೋತ್ತರಶತೈರತ್ಯುತ್ತಮೈರ್ಗುಂಫಿತಂ ಲಕ್ಷ್ಮೀತತ್ ಕೃತವಾನ್ ಮುಹೂರ್ತಶತಕಂ ಮೌಹೂರ್ತಿಕಾನಾಂ ಹಿತಂ ॥

॥ ಮುಹೂರ್ತಶತಕಂ ಸಮಾಪ್ತಂ ॥